ಮನೋಹರ ಗ್ರಂಥ ಮಾಲೆಯ ಸಾಹಿತ್ಯೋತ್ಸವ ಪ್ರಕಟನೆ

# ಆಶುನಾಟಕಗಳು

(ಮೂರು ಏಕಾಂಕಗಳ ಸಂಗ್ರಹ)

**ಸಂಪಾದಕ:**

ಜಿ. ಬಿ. ಜೋಶಿ

೧೯೪೨



ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ ಎ.
ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.
ಶ್ರೀ. ವಿ. ಕೃ. ಗೋಕಾಕ, ಬಿ. ಎ. ( ಆಕ್ಸ್‌ಫರ್ಡ )

ಸಂಪಾದಕ:

ಜಿ. ಬಿ. ಜೋಶಿ



ಬೆಲೆ: ೦ ೧೦-೦

ಪ್ರಕಾಶಕರು:
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಮುದ್ರಕರು:
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ಮೊದಲ ಮಾತು



ಶೀಘ್ರಕವಿಯ ‘ಆಶುಕವನ’ದಂತೆ, ಸಾಹಿತಿಗಳ ಸಾಹಿತ್ಯಕೇಳಿಯಲ್ಲಿ ಲೀಲಾವಿನೋದಕ್ಕಾಗಿ ಸಾಮೂಹಿಕವಾಗಿ ಹುಟ್ಟಿದ ಒಂದು ಒಳ್ಳೆಯ ಕಾವ್ಯಕೃತಿಯಂತೆ, ಈ ‘ಆಶುನಾಟಕ’ಗಳೂ ಕುಶಲ ನಟ-ನಾಟಕಕಾರರ ಸಮಯೋಚಿತ ಸಮಯಸ್ಫೂರ್ತಿಯಿಂದ ಹುಟ್ಟಿಬಂದಿವೆ.

ಈ ಆಶುನಾಟಕದ ಕಲ್ಪನೆಯು ಮೊಟ್ಟಮೊದಲು ನನ್ನ ತಲೆಯಲ್ಲಿ ಮೂಡಿದ್ದು ಏಳು ವರ್ಷಗಳ ಹಿಂದೆ—ನನ್ನ ಗೆಳೆಯನ ಮದುವೆಯ ಶುಭ ಪ್ರಸಂಗದಲ್ಲಿ.

ನನ್ನ ಗೆಳೆಯ ನಟ. ಹಾಸ್ಯಪಾರ್ಟಿ. ಮಾತಿನಲ್ಲಿ ಚತುರ. ನಗಿಸುವ ನಗೆಗಾರ ಬೆಲ್ಲಕ್ಕೆ ಇರುವೆ ಮುತ್ತುವ ಹಾಗೆ ಅವನ ಸುತ್ತಲೂ ಯಾವಾಗಲೂ ಜನ. ಅವನ ಮಾತೆಂದರೆ ಅಷ್ಟು ಸವಿ. ಅವನು ಕುಳಿತಲ್ಲಿ ಕಂಪನಿ, ನಿಂತಲ್ಲಿ ನಾಟಕ. ಇಷ್ಟೆಲ್ಲ ಅವನ ಗುಣಪ್ರದರ್ಶನಕ್ಕೆ ಒಂದು ಜಾಗ ಬೇಕಲ್ಲ-- ಒಂದು ನಾಟ್ಯಸಂಘ ಅದಕ್ಕಾಗಿ ಮೀಸಲಾಗಿದೆ ನನ್ನ ಗೆಳೆಯ ಆ ನಾಟ್ಯಸಂಘದ ಸದಸ್ಯ. ಅವನ ಮದುವೆಗೆ ನಾಟ್ಯಸಂಘದ ಸದಸ್ಯರೆಲ್ಲರೂ ಬಂದಿದ್ದರು. ನಾನೂ ಹೋಗಿದ್ದೆ ಸರಿ-ಸುಮಾರಿಗೆಯ ಮೂವತ್ತು ಮೂವತ್ತೈದು ಹುಡುಗರು ಒಟ್ಟಿಗೆ—ಅದೂ ತಮ್ಮೊಬ್ಬ ಗೆಳೆಯನ ಮದುವೆಗಾಗಿ—ಕೂಡಿದರೆ ಅವರ ಹರಟೆಗೆ, ಲೀಲೆಗಳಿಗೆ, ಚಕ್ಕಂದಕ್ಕೆ ಇತಿಮಿತಿ ಉಳಿಯುವುದೇ! ಎಲ್ಲರ ಮನಸ್ಸೂ ಆಗ ಗಾಳಿಯಂತೆ ಹಗುರು. ಅರ್ಥವಿಲ್ಲದ, ಸ್ವಾರ್ಥವಿಲ್ಲದ ಮುಕ್ತ ಮನಸ್ಸು ಅದು ಮಾತು ಮಾತಿಗೂ ನಗೆಯಾಡುವದು; ಅರ್ಥವಿಲ್ಲದ ಮಾತುಗಳಿಗೂ ನಗುವದು. ಮದುವೆ ತೀರಿಸಿಕೊಂಡು ತಿರುಗಿ ಬರುವಾಗ ಬನಶಂಕರಿಯಲ್ಲಿ ರಾತ್ರಿಯ 'ವಸ್ತಿ'ಯಾಗಬೇಕೆಂದು ಯಾವನ ತಲೆಯಲ್ಲಿಯೊ ಮಿಂಚಿತು. ಸರಿ, ಅದು ಕೃತಿಯಲ್ಲಿ ಬಂದೇಬಿಟ್ಟಿತು. ತಿರುಗಿ ಬರುವಾಗ ಬನಶಂಕರಿಗೇ 'ವಸ್ತಿ' ಬಿತ್ತು. ಅಂದು ಹುಣ್ಣಿಮೆ. ಶುಭ್ರ ಬೆಳದಿಂಗಳು ಶಂಕರಿಯ ಬನವನ್ನೆಲ್ಲ ತುಂಬಿತ್ತು. ವಯಸ್ಸು ಕಳೆದವರೂ ಕೂಡ ಆ ಬನ, ಆ ಬೆಳದಿಂಗಳು ನೋಡಿ ತಮ್ಮ ಹುಡುಗತನದ ನೆನಪಾಗಿ ಮನಸ್ಸಿನಲ್ಲಿಯಾದರೂ ಕುಣಿದಾಡಿರಬೇಕು, ನೆಗೆದಾಡಿರಬೇಕು. ನಮ್ಮ ಆ ಚಿಕ್ಕ ವಯಸ್ಸು ಎಲ್ಲದರಲ್ಲಿಯೂ ರಮ್ಯತೆಯನ್ನು ಕಾಣುತ್ತಿತ್ತು.

'ಈ ಹೊತ್ತು ರಾತ್ರಿ ಯಾರೂ ಮಲಗುವಂತಿಲ್ಲ' ಎಂದು ಯಾರೊ ಸಾರಿದರು. ಹಿರಿಯರೂ ಹುಡುಗರೂ ಅದಕ್ಕೆ 'ಹೂಂ' ಎಂದರು. 'ಮಲಗದಿದ್ದರೆ ಹಾಗಾದರೆ ಏನು ಮಾಡಬೇಕು?' ಎಂಬುದನ್ನು ವಿಚಾರಿಸಿ ಕಾರ್ಯಕ್ರಮವನ್ನು ಗೊತ್ತುಪಡಿಸುವದಕ್ಕಾಗಿ ನಾಟ್ಯಸಂಘದ ಸದಸ್ಯರ ಮಂತ್ರಾಲೋಚನೆಯ ಸಭೆ ಕೂಡಲೆ ಸೇರಿತು. ತರ್ಕ-ವಿತರ್ಕ, ವಾದ-ವಿವಾದ, ಪ್ರಶ್ನೋತ್ತರ ಎಲ್ಲ ಮುಗಿದು ಕೊನೆಗೆ ನನ್ನ ಗೆಳೆಯನ ಸೂಚನೆಯಂತೆ ಯಾವುದಾದರೊಂದು ನಾಟಕವಾಡಬೇಕೆಂದು ತೀರ್ಮಾನವಾಯಿತು. ಇಷ್ಟು

ಶಂಕರಿಯ ದೇವಸ್ಥಾನದಲ್ಲಿಳಿದವರೆಲ್ಲರಿಗೂ ಹೋಗಿ ಮುಟ್ಟಿತು. ಎಲ್ಲರೂ ಕುತೂಹಲದಿಂದ ನಾಟಕ ಪ್ರಾರಂಭವನ್ನೇ ಎದುರು ನೋಡಹತ್ತಿದರು.

ನನ್ನ ಗೆಳೆಯ ತನ್ನ ಕೆಲ ನುರಿತ ಸಂಗಡಿಗರನ್ನು ಆಯ್ದುಕೊಂಡ. ಅವರಿಗೆಲ್ಲ ತಾನು ಕಲ್ಪಿಸಿಕೊಂಡ ಕತೆಯನ್ನೆಲ್ಲ ಹೇಳಿದ. ಅವರವರ ಪಾತ್ರ ಅವರವರಿಗೆ ಹಂಚಿಕೊಟ್ಟ. ಕತೆಯಲ್ಲಿಯ ವ್ಯಕ್ತಿಗಳ ಸ್ವಭಾವಪರಿಚಯ ಅವರಿಗೆ ಮಾಡಿಕೊಟ್ಟ. ಮಾತು ಮಾತ್ರ ರಂಗಭೂಮಿಯ ಮೇಲೇ ಸರಿ ಮಾಡಿಕೊಳ್ಳುವದಕ್ಕೆ ಬಿಟ್ಟ.

ಇತ್ತ ರಂಗಭೂಮಿಯ ಸಿದ್ಧತೆ ನಡೆಯಿತು. ಶಂಕರಿಯ ಆವಾರವೇ ರಂಗಭೂಮಿಯಾಯಿತು ಗುಡಾರವೇ ಅಂಕಪಡದೆಯಾಯಿತು ಹಾಸಿಗೆ ಸುರುಳಿಗಳೇ ದಿಂಬುಗಳಾದವು. ಮುದುಪಗೆಂದು ತಂದ ಒಂದೆರಡು 'ವಿಲಾಯಿತಿ ದೀಪ'ಗಳೇ ಬೆಳಕು ಬೀರಲಣಿಯಾದುವು. ಸೀರೆ-ಪೀತಾಂಬರಗಳಿಗೇನು ಕಡಿಮೆ ಇಂಥಲ್ಲಿ !

ರಂಗಭೂಮಿ ಸಿದ್ಧವಾಗುವಷ್ಟರಲ್ಲಿ ಒಂದು ಮೂಲೆಯಲ್ಲಿ ನನ್ನ ಗೆಳೆಯ ತನ್ನ 'ಗ್ರೀನ್ ರೂಮು' ಸಿದ್ಧಮಾಡಿಕೊಂಡಿದ್ದ. ಎಲ್ಲ ಪಾತ್ರಗಳನ್ನೂ ತಯಾರಿಸಿದ್ದ. ತಾನೂ ಸಿದ್ಧನಾಗಿದ್ದ. ಬಣ್ಣದ ಜೆಡಗಿಲ್ಲದೆ, ಭರ್ಜರಿ ಪಡದೆ ಇಲ್ಲದೆ, ಚಕ್-ಪಕ್ ಸೀನ್-ಸೀನರಿಗಳ ಜಂಜಾಟವಿಲ್ಲದೆ, ಆ ಅಟ್ಟಂಬಟ್ಟಾರಣ್ಯದಲ್ಲಿ ನನ್ನ ಗೆಳೆಯನ ನಾಟಕ **'ಸರಿಯಾಗಿ ಹತ್ತು ಗಂಟೆಗೆ'** ಪ್ರಾರಂಭವಾಗಿಯೆ ಬಿಟ್ಟಿತು.

ಪ್ರಾರಂಭವಾಗಿದ್ದ ನಾಟಕ ಮೊದಲಿನಿಂದ ಕೊನೆಯ ವರೆಗೂ ಕಳೆ ಕಟ್ಟುತ್ತ ಬಂತು. ನೆರೆದವರು ಬಾಯಿ ತೆರೆದು ನೋಡುತ್ತಿದ್ದರು. ನನ್ನ ಗೆಳೆಯನ ಸಮಯೋಚಿತ ಮಾತು, ಅಭಿನಯ ಅವರನ್ನು ಮೈಮರೆಸಿದುವು.

ನಾಟಕ ನಲವತ್ತೈದು ನಿಮಿಷಗಳ ವರೆಗೂ ಆಯಿತು. 'ನಾಟಕದಲ್ಲಿಯ ಕತೆಯೇನು ?' ಎಂಬುದನ್ನು ನಾನಿಲ್ಲಿ ಹೇಳಲಾರೆ. ಆ ನಾಟ್ಯಸಂಘದವರು ನನ್ನ ಗೆಳೆಯನ ಆ ಅಲಿಖಿತ ನಾಟಕವನ್ನು ಈಗಲೂ ಅಭಿನಯಿಸುತ್ತಿದ್ದಾರೆ. ಸಮಯ ಸಾಧಿಸಿ ಅದನ್ನು ನೋಡಿರಿ. ಇಲ್ಲಿ ನಾನೇ ಅದನ್ನು ಬರೆಯಲು ಹವಣಿಸಿದರೆ—ಅಷ್ಟು ರಸದುಂಬಿ, ರುಚಿಯಾಗಿ, ನಾಟಕ ಕಣ್ಣಿಗೆ

ಕಟ್ಟುವಂತೆ ನಾನು ಬರೆದೇನೆಂಬ ಧೈರ್ಯವೂ ನನಗಿಲ್ಲ—ಓದುಗರಿಗೆ ಅದನ್ನು ನೋಡಿದಷ್ಟು ರುಚಿ, ಓದಿದರೆ ಸಿಕ್ಕಲಾರದೆಂಬದು ನನಗೆ ಗೊತ್ತಿದೆ. ಅಂತೆಯೇ ಬಿಟ್ಟಿದ್ದೇನೆ. ಕ್ಷಮಿಸಿ.

ಗುಡಾರದ ಅಂಕ ಪಡದೆ ಬೀಳುವ ಹೊತ್ತಿಗೆ ಹೆಣ್ಣುಮಕ್ಕಳಲ್ಲಿ ಸ್ವಲ್ಪ ಗುಜುಗುಜು ನಡೆದದ್ದು ಕೇಳಿಸಿತು. ನಾನೇ ಹೋಗಿ ನೋಡಿದೆ. ಮದು-ಮಗಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. 'ಏನಾಯಿತು?' ಎಂದೆ. 'ನಾಟಕ ದಾಗಿನ ತನ್ನ ಗಂಡನ ಹುಚ್ಚುಹುಚ್ಚು ನೋಡಿ, ಖರೇನs ಹುಚ್ಚಾSಂತ ತಿಳಕೊಂಡು ಅಳತಾಳ!' ಎಂದು ಒಂದು ಹುಡುಗಿ ಹೇಳಿ ನಕ್ಕಿತು. ನನಗೂ ನಗೆ ಒಂತು. ನನ್ನ ಗೆಳೆಯನ ಹತ್ತರ ಹೋಗಿ ಈ ಮಾತು ತಿಳಿಸಿದೆ. ನನ್ನ ಗೆಳೆಯ ನಕ್ಕ, ಏನೂ ಉತ್ತರ ಕೊಡಲಿಲ್ಲ. ಅಷ್ಟೊತ್ತಿಗೆ ಪ್ರೇಕ್ಷಕರಲ್ಲಿಯ ಒಬ್ಬರು ಸದ್ಗೃಹಸ್ಥರು ನಮ್ಮನ್ನೆಲ್ಲ ಸರಿಸಿ, ನನ್ನ ಗೆಳೆಯನ ಹತ್ತಿರ ಹೋಗಿ "ನಾಟಕಾ ಬಹಳ 'ಗ್ರ್ಯಾಂಡ್' ಆತರೆಪಾ! ಈ ನಾಟಕ ಯಾರು ಬರದ್ದು?" ಎಂದು ಕೇಳಿದರು. ನನ್ನ ಗೆಳೆಯ 'ಈ ನಾಟಕಾ ಬರದ್ದಲ್ಲರೀ, ಬಂದದ್ದು' ಎಂದು ಹೇಳಿ ನಕ್ಕ.

ಹೀಗೆ ಕೆಲ ನಟರೆ ಕೂಡಿ ಯಾವದೊ ಒಂದು ಕತೆಯ ಎಳೆಯನ್ನು ಹಿಡಿದುಕೊಂಡು ಮಾತಿಗೆ ಮಾತು ಜೋಡಿಸುತ್ತ, ತಮ್ಮ ಲೀಲಾವಿನೋದ ದಲ್ಲಿ, ತಮಗೂ ತಿಳಿಯದಂತೆ, ಒಂದು ಸಾಹಿತ್ಯಕೃತಿಯನ್ನು ನಿರ್ಮಿಸಿದರು. ಅದೇ ಮುಂದೆ 'ವರ ಪರೀಕ್ಷೆ' ಎಂದು ಹೆಸರು ಪಡೆದು, ಆ ನಾಟ್ಯ ಸಂಘಕ್ಕೆ ಅಭಿನಯಿಸಲು ಒಂದು ಅಲಿಖಿತ ನಾಟಕವಾಯಿತು.

ಏಳು ವರ್ಷಗಳ ಹಿಂದೆ ನಡೆದ ಈ ಸಂಗತಿಯೆಲ್ಲ ಅಂದು ನನ್ನ ಮನಸ್ಸಿನ ಭೂಮಿಯಲ್ಲಿ ಬೀಜವಾಗಿ ನಾಟಿತು. ಏಳು ವರ್ಷ ಕಾಲ ಯಾವುದೋ ಒಂದು ಆಶೆಯ ಹಸಿಯಿಂದ ಅಲ್ಲಿಯೆ ಬೆಳೆಯಿತು. '**ಮನೋಹರ ಗ್ರಂಥ ಮಾಲೆಯ ಸಾಹಿತ್ಯೋತ್ಸವದ**' ಸುಗ್ಗಿಯಲ್ಲಿ ಫಲ ಬಿಟ್ಟಿತು. ಆ ಫಲವೇ ಈ '**ಆಶುನಾಟಕಗಳು**'. ಅದನ್ನೆ ನಾನೀಗ ಕನ್ನಡಿಗರ ಕೈಗೆ ಕೊಟ್ಟಿದ್ದೇನೆ.

ಆಶುನಾಟಕ ಸ್ಪರ್ಧೆ ನಡೆಯುವ ಮೊದಲು ಈ ನಾಟಕಗಳು ತಂತ್ರ ದಲ್ಲಿ, ಸರಸಸಂಭಾಷಣಾಚಾತುರ್ಯದಲ್ಲಿ, ಕೊಟ್ಟ ವಿಷಯದ ಬಗ್ಗೆ ಕತೆ ಯನ್ನು ಸ್ವಾಭಾವಿಕವಾಗಿ ಬೆಳೆಸಿಕೊಂಡು ಹೋಗುವ ರೀತಿಯಲ್ಲಿ, ಇಷ್ಟು

ಪ್ರೊಗಸಾಗಿ ಅಭಿನಯಿಸಲ್ಪಡಬಹುದೆಂದಾಗಲಿ, ಆ ನಾಟಕಗಳನ್ನೆಲ್ಲ ಕೂಡಿಸಿ ಪುಸ್ತಕರೂಪವಾಗಿ ಪ್ರಕಟಿಸಬಹುದೆಂದಾಗಲಿ, ನಾನು ನನ್ನ ಕನಸು ಮನಸಿನಲ್ಲಿಯೂ ಬಗೆದಿರಲಿಲ್ಲ. ಆಶುನಾಟಕ ಸ್ಪರ್ಧೆಯಲ್ಲಿ ಭಾಗವಹಿಸಿದ ಬಾಗಿಲುಕೋಟೆ, ಬೆಂಗಳೂರು, ಗದುಗಿನ ನಾಟ್ಯಸಂಘದವರು ತಾವು ಅಭಿ-ನಯಿಸಿದ ನಾಟಕಗಳನ್ನು ನೆನಪಿನಿಂದ ಬರೆದು ಕೊಟ್ಟಿರದಿದ್ದರೆ, ಇದೆಲ್ಲ ಮನಸ್ಸಿನಲ್ಲಿಯು ಮಂಡಿಗೆಯೆ ಆಗುತ್ತಿತ್ತು. ಆದರೆ ಗಾಳಿಗೂಡಿ ಹೋಗಬಹುದಾಗಿದ್ದ ಮಾತುಗಳು ರೂಪುಗೊಂಡು ನಾಟ್ಯಸಂಘದವರ ಸಹಾಯದಿಂದ ಇಲ್ಲಿ 'ಕೃತಿ'ಯಾಗಿ ನಿಂತಿವೆ. ಅದಕ್ಕಾಗಿ ನಾನು ಆ ನಾಟ್ಯಸಂಘದವರಿಗೆ ಕೃತಜ್ಞನಾಗಿದ್ದೇನೆ.

ಈ ರೀತಿಯ ಆಶುನಾಟಕ ಸ್ಪರ್ಧೆಯ ಪ್ರಯೋಗ ಈ ಪ್ರಮಾಣದಲ್ಲಿ ಆದದ್ದು ಇದೇ ಮೊದಲನೆಯ ಸಲವೆನ್ನಬಹುದು. ಮಂಗಳೂರತ್ತ ಶ್ರೀ. ಕಾರಂತರು ತಮ್ಮ ಸಂಗಡಿಗರೊಂದಿಗೆ ಆಗೀಗ ಈ ರೀತಿಯ ನಾಟಕ ಪ್ರಯೋಗಗಳನ್ನು ಮಾಡುತ್ತಿರುತ್ತಾರೆಂದು ಕೇಳಿದ್ದೇನೆ. ಬೆಂಗಳೂರು, ಮೈಸೂರುಗಳಲ್ಲಿಯೂ ಕೆಲ ಪ್ರಯೋಗಗಳು ನಡೆದಿರಬಹುದು. ನನಗೆ ಗೊತ್ತಿಲ್ಲ. ಆದರೆ ಹೀಗೆ ಆಶುನಾಟಕಗಳ **ಸ್ಪರ್ಧೆ** ನಡೆದದ್ದು ಮಾತ್ರ ಇದೇ ಮೊದಲೆಂದು ನನಗೆ ತೋರುತ್ತದೆ.

ಈಗ ಆದ ಈ ಸ್ಪರ್ಧೆ ಇನ್ನೂ ಅಷ್ಟು ದೊಡ್ಡ ಪ್ರಮಾಣದಲ್ಲಿ ನಡೆಯಬಹುದಾಗಿತ್ತು; ಆದರೆ ಅದಕ್ಕೆ ಕಾಲದ ಅನುಕೂಲತೆ ಇರಲಿಲ್ಲ. ಬರಬೇಕೆಂದರೂ ಪ್ರವಾಸ ಬಹಳ ತೊಂದರೆಯದಾಗಿತ್ತು. ಆದರೆ ಈ ಯುದ್ಧದ ಕಾಲ ಸರಿದು ಅನುಕೂಲ ಕಾಲ ಬಂತೆಂದರೆ ಇನ್ನೊಮ್ಮೆ ಇದೇ ರೀತಿಯ ನಾಟಕ ಸ್ಪರ್ಧೆಯನ್ನು ಇದಕ್ಕೂ ಹೆಚ್ಚು ವಿಸ್ತಾರವಾಗಿ ಏರ್ಪಡಿಸಬೇಕೆಂಬ ಆಶೆಯ ಬಳ್ಳಿ ನನ್ನಲ್ಲಿನ್ನೂ ಕಮರಿಲ್ಲ. ಮತ್ತೆ ಅದು ಸಕಾಲದಲ್ಲಿ ಕುಡಿಯೊಡೆದು ಹೂ ಬಿಟ್ಟೀತು.

ಸಾಹಿತ್ಯೋತ್ಸವದ ಕಾರ್ಯಕ್ರಮಗಳಲ್ಲಿ ಆಶುನಾಟಕ ಸ್ಪರ್ಧೆಯ ಕಾರ್ಯಕ್ರಮ ತೀರ ಹೊಸದು. ಬಹಳ ಜನರಿಗೆ ಗೊತ್ತಿಲ್ಲದ್ದು. ಅಂತೆಯೆ ನೋಡಲು ಬಂದಿದ್ದವರೆಲ್ಲರೂ ಈ ಆಶುನಾಟಕಗಳ ಪ್ರಯೋಗ ಏನಾಗುವ್ವದೋ ಏನೋ ಎಂದು ತವಕದಿಂದ ನಿರೀಕ್ಷಿಸುತ್ತಿದ್ದರು.

ಉತ್ಸವಕ್ಕೆ ಬಂದಿದ್ದ ಐದು ನಾಟ್ಯ ಸಂಘಗಳಲ್ಲಿ ಮೂರೇ ಮಾತ್ರ ಈ ಸ್ಪರ್ಧೆಯಲ್ಲಿ ಭಾಗ ವಹಿಸಲು ಧೈರ್ಯ ಮಾಡಿದವು. ಈ ಮೂರರಲ್ಲಿಯೂ ಮೊದಲು ಅಭಿನಯಿಸುವ ಸಾಹಸ ಮಾಡಿದವರು ಬಾಗಿಲುಕೋಟೆಯ ನಾಟ್ಯ ಸಂಘದವರು.

ಈ ಸ್ಪರ್ಧೆಯ ವಿವರಗಳನ್ನೆಲ್ಲ ಗೊತ್ತುಮಾಡಿ, ಅದರ ಕಾರ್ಯಕ್ರಮವನ್ನೆಲ್ಲ ಶ್ರೀಮಾನ್ ಮುಗಳಿಯವರು ಹೊತ್ತು ನಡೆಯಿಸಿದರು. ಸ್ಪರ್ಧೆಯ ಫಲಶ್ರುತಿ ಹೇಳುವ ಕಠಿಣವಾದ, ಸೂಕ್ಷ್ಮವಾದ ಕೆಲಸವನ್ನು ಶ್ರೀಗಳಾದ ಕಾರಂತ, ಸಂಗೋರಾಮ, ಎಂ. ಜಿ. ವೆಂಕಟೇಶಯ್ಯ ಇವರು ಒಳ್ಳೆ ಧೈರ್ಯದಿಂದ ನಿರ್ವಹಿಸಿದರು. ಇವರೆಲ್ಲರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಉತ್ಸವದ ಮೊದಲ ದಿನ ಸಂಜೆ ಐದು ಗಂಟೆಗೆ ಶ್ರೀ. ಮುಗಳಿಯವರು "ಒಬ್ಬ ಸಂಸಾರಿಗನಾದ ಸಾಹಿತಿಯು ಒಂದು ಕವನವನ್ನು ಒಂದೇ ದಿನದಲ್ಲಿ ಕಟ್ಟಿ ಮುಗಿಸಲು ಪ್ರಯತ್ನಿಸಿ, ಆಗದ್ದಕ್ಕೆ ನಿರಾಶನಾಗುವ ಬಗೆ' ಮತ್ತು "ಲಾಟರಿಯಲ್ಲಿ ಒಂದು ಲಕ್ಷ ರೂಪಾಯಿ ಗೆದ್ದು ಉನ್ಮತ್ತನಾದ ಭಾಗ್ಯವಂತನ ಒಂದು ದಿನಚರ್ಯೆ" ಎಂದಿಷ್ಟು ಎರಡು ಕಾಗದ ತುಂಡಿನ ಮೇಲೆ ಬೇರೆ ಬೇರೆಯಾಗಿ ಬರೆದು ಬಾಗಿಲುಕೋಟೆ, ಬೆಂಗಳೂರಿನ ನಾಟ್ಯ ಸಂಘದವರಿಗೆ ಕೊಟ್ಟರು. ಅಂದೇ ರಾತ್ರಿ ಒಂಭತ್ತು ಗಂಟೆಗೆ, ಕೊಟ್ಟ ಆ ವಿಷಯಕ್ಕೆ ಹೊಂದಿಕೆಯಾಗುವಂತೆ ತಾವೇ ಕತೆ ಕಟ್ಟಿಕೊಂಡು ಅರ್ಧ ತಾಸಿನ ಒಂದು ನಾಟಕವನ್ನು ಅಭಿನಯಿಸಬೇಕೆಂದು ಅವರಿಗೆ ತಿಳಿಸಲಾಯಿತು

ಇದೆಲ್ಲವೂ ಹೊಸದು; ಪ್ರಯೋಗ. ಎಲ್ಲಿ ಅಪಹಾಸ್ಯಕ್ಕೀಡಾಗುವೆವೋ ಎಂದು ಆ ನಾಟ್ಯಸಂಘದವರಿಗೆ ಭಯ. ಹೂಡಿದ ಈ ಸ್ಪರ್ಧೆಯ ಪ್ರಯೋಗ ಹದಗೆಟ್ಟು ಮಾಡಿದವರಿಗೂ ಮಾಡಿಸಿದವರಿಗೂ ಕೂಡಿಯೆ ಒಂದು ಅಳುಕಿನ ನೆನಪಾಗಿ ಎಲ್ಲಿ ಉಳಿದೀತೊ ಎಂದು ನನಗೆ ಭಯ. ಬಂದಿದ್ದ ಉಳಿದವರಿಗೆಲ್ಲ ಏನೇ ಆಗಲಿ, ನಾಟಕ ನೋಡಬೇಕೆಂಬ ತಡೆಯಲಾರದ ಕುತೂಹಲ.

ಸರಿಯಾಗಿ ರಾತ್ರಿ ಒಂಬತ್ತಕ್ಕೆ ಮೊದಲು ಬಾಗಿಲುಕೋಟೆಯವರ ಆಶುನಾಟಕ ಪ್ರಾರಂಭವಾಯಿತು. ಅಲ್ಲಲ್ಲಿ ಬೇರೆಯವರ ನಾಟಕಗಳ ಛಾಯೆ ಅದರಲ್ಲಿ ಕಂಡುಬಂದರೂ ಒಟ್ಟಿನಲ್ಲಿ ಅದೊಂದು ಒಳ್ಳೆಯ ನಾಟಕವೆನಿಸಿತು. ಅವರಲ್ಲಿಯ ಶ್ರೀನಿವಾಸಾಚಾರ್ಯರ ಪಾತ್ರವೆ ಇಡೀ ಆ ನಾಟಕಕ್ಕೆ ಜೀವಕಳೆ ತಂದಿತ್ತು. ನೋಡಿದವರಿಗೆಲ್ಲ ನಾಟಕ ಬಹಳ ಸಂತೋಷ ಕೊಟ್ಟಿತು.

ಅಂದೇ ರಾತ್ರಿ ಬಾಗಿಲುಕೋಟೆಯವರ ನಾಟಕ ಮುಗಿದ ಕೂಡಲೆ ಬೆಂಗಳೂರಿನವರ ನಾಟಕ ಪ್ರಾರಂಭವಾಯಿತು. ನಟ-ನಾಟಕಕಾರರಾದ ಶ್ರೀ ಬಿ ಸದಾಶಿವಯ್ಯನವರು ಅದರಲ್ಲಿ ಪಾತ್ರ ವಹಿಸಿದ್ದರು. ನಾಟಕದಲ್ಲಿ ಯಾವುದನ್ನೂ ತೆಗೆದುಹಾಕುವಂತಿರಲಿಲ್ಲ ಕಥೆ, ಸಂಭಾಷಣೆ, ಪಾತ್ರಸೃಷ್ಟಿ ಅಭಿನಯ ಎಲ್ಲವೂ ' ಹೌದು, ನಾಟಕ ಬರೆದರೆ ಹೀಗೆ ಬರೆಯಬೇಕು ಆಡಿದರೆ ಹೀಗೆ ಆಡಬೇಕು.' ಎನ್ನುವ ಹಾಗಿದ್ದವು. ಇವರ ನಾಟಕದಲ್ಲಿ 'ಇಂಥವರಕಿಂತ ಇಂಥವರು ಚೆನ್ನಾಗಿ ಅಭಿನಯಿಸಿದರು,' ಎಂದು ಹೇಳುವದೇ ಬಹಳ ಕಷ್ಟ. ಎಲ್ಲರೂ ಅಷ್ಟೇ ಚೆನ್ನಾಗಿ, ನೈಜವಾಗಿ ಅಭಿನಯಿಸಿದರು. ಕಡಿಮೆ ಮಾತಿನಲ್ಲಿ ಅಭಿನಯದಿಂದ ಅರ್ಥದ ಹುರುಳು ತುಂಬುವದನ್ನು ಇವರಿಂದಲೇ ಕಲಿಯಬೇಕು. ಇವರ ನಾಟಕ ನೋಡಿ 'ಶ್ರೀನಿವಾಸ'ರು 'It is a perfect piece of art' ಎಂದು ಮೆಚ್ಚಿ ನುಡಿದರು. ಈ 'ಸೌಭಾಗ್ಯ' ಕನ್ನಡದ ಸೌಭಾಗ್ಯವೇ.

ಕೊನೆಯ ದಿನ ರಾತ್ರಿ ಗದುಗಿನ ನಾಟ್ಯಸಂಘದವರು ತಮ್ಮ ಪಾಲಿಗೆ ಬಂದಿದ್ದ ವಿಷಯವನ್ನು ತೆಗೆದುಕೊಂಡು ನಾಟಕವಾಡಿದರು. ನಾಟಕ ಮೊದಮೊದಲು ಸಪ್ಪಗೆ ಸುರುವಾದರೂ ಬರಬರುತ್ತ ಕಳೆಯೇರಿತು. ಮಾರವಾಡಿಯ ಪಾತ್ರ ಬಂದಮೇಲಂತೂ ನಾಟಕ ಶಿಖರ ಮುಟ್ಟಿತು. ಇವರಿಗೇ ಸ್ಪರ್ಧೆಯ ಬಹುಮಾನ ದೊರಕಿತು.

ಈ 'ಆಶುನಾಟಕಗಳ' ಸಂಗ್ರಹವು ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವದ ಸವಿನೆನಪಿಗಾಗಿ ಪ್ರಕಟವಾಗಿದೆ. ಅದೂ ಕೂಡ ಕನ್ನಡಿಗರಾದ ಕೆಲ ಉದಾರ ಅಂತಃಕರಣಿಗಳ ಧನಸಹಾಯದಿಂದ. ಒಳ್ಳೆಯ ಮೇಧಾವಿ ಡಾಕ್ಟರರೆಂದು ಹೆಸರುಪಡೆದ ವೈ. ವಾ. **ವಾಸುದೇವರಾವ ಉಮಚಗಿ**ಯವರ ನೆನಪಿಗಾಗಿ ಅವರ ಮಕ್ಕಳಾದ ಶ್ರೀ. ಆನಂದರಾಯರು

ಸಾಹಿತ್ಯೋತ್ಸವದ ಕಾಲಕ್ಕೆ ಒಂದು ನೂರಾ ಒಂದು ರೂಪಾಯಿಯ ಕಾಣಿಕೆ ಸಲ್ಲಿಸಿದ್ದಾರೆ. ವಾಸುದೇವರಾಯರ ಕಟು-ಮಧುರ ತತ್ವನಿಷ್ಠ ಜೀವನದ ಬಗ್ಗೆ ನನಗೆ ಅವರಲ್ಲಿ ತುಂಬ ಗೌರವವಿತ್ತು, ಆದರವಿತ್ತು. ಆದರ ಕುರುಹೆಂದೆ ಈ 'ಆಶುನಾಟಕ'ಗಳನ್ನು ಕೃತಜ್ಞತೆಯಿಂದ ಅವರ ಚಿರ ಆತ್ಮಕ್ಕೆ ಅರ್ಪಿಸಿದ್ದೇನೆ.

ಅದರಂತೆ ಶ್ರೀ. ಜೀವಣದಾಸ ಪುಣೇಕರ ಮತ್ತು ಅವರ ಬಂಧುಗಳು ಅಕಾಲದಲ್ಲಿ ಮೃತ್ಯುವಿಗೀಡಾದ ತಮ್ಮ ತಮ್ಮನಾದ **ಗಣಪತದಾಸ ಪುಣೇಕರರ** ಸ್ಮರಣಾರ್ಥವಾಗಿ ಐವತ್ತೊಂದು ರೂಪಾಯಿಯ ಕಾಣಿಕೆ ಸಲ್ಲಿಸಿದ್ದಾರೆ.

ತಮ್ಮ ಸ್ನೇಹದ ಕಾಣಿಕೆಯೆಂದು 'ಅಥಣಿಯ ಗೆಳೆಯರು' ಸಾಹಿತ್ಯೋತ್ಸವಕ್ಕೆ ಇಪ್ಪತ್ತು ರೂಪಾಯಿ ಸಲ್ಲಿಸಿದ್ದಾರೆ.

ಇವರೆಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

ಈ 'ಆಶುನಾಟಕಗಳಿ'ಗೆ ಆಶೆ ಹುಟ್ಟಿಸುವಂತಹ ಚಿತ್ತಾಕರ್ಷಕ ಹೊದಿಕೆ-ಚಿತ್ರವನ್ನು ಗೆಳೆಯ ರಾಘವೇಂದ್ರರು ಬರೆದುಕೊಟ್ಟಿದ್ದಕ್ಕಾಗಿ ನಾನು ಅವರಿಗೆ ಎಂದಿಗೂ ಉಪಕೃತನಾಗಿದ್ದೇನೆ.

ಈ 'ಆಶುನಾಟಕ'ಗಳನ್ನು ನಿರ್ಮಿಸಿ, ಅಭಿನಯಿಸಿ, ಬರೆದುಕೊಟ್ಟ ಬಾಗಿಲುಕೋಟೆ, ಬೆಂಗಳೂರು, ಗದುಗಿನ ನಾಟ್ಯಸಂಘದವರಿಗೆ, ಆಶುನಾಟಕ ಸ್ಪರ್ಧೆಗೆ ಪರೀಕ್ಷಕರಾಗಿ ಕೆಲಸ ಮಾಡಿದ ಶ್ರೀಗಳಾದ ಕಾರಂತ, ಸಂಗೋರಾಮ, ವೆಂಕಟೇಶಯ್ಯ ಇವರಿಗೆ, ಆಶುನಾಟಕಗಳಿಗೆ ವಿಷಯ ಆಯ್ದು ಕೊಟ್ಟು, ಆ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿದ್ದಕ್ಕಾಗಿ ಶ್ರೀ. ರಂ. ಶ್ರೀ. ಮುಗಳಿಯವರಿಗೆ, ಕಾಣಿಕೆ ಸಲ್ಲಿಸಿ ಸಹಾಯಮಾಡಿದ ಡಾ. ಉಮಚಿಗಿ ಆನಂದರಾಯರು, ಜೀವಣದಾಸ ಪುಣೇಕರ, 'ಅಥಣಿಯ ಗೆಳೆಯರು' ಇವರಿಗೆ, ಹೊದಿಕೆಯ ಚಿತ್ರ ಬರೆದುಕೊಟ್ಟ ಶ್ರೀ. ರಾಘವೇಂದ್ರರಿಗೆ, ಇವರೆಲ್ಲರಿಗೂ ನಾನು ಬಹಳ ಕೃತಜ್ಞನಾಗಿದ್ದೇನೆಂದು ಇನ್ನೊಮ್ಮೆ ತಿಳಿಸಿ ಈ 'ಮೊದಲ ಮಾತು' ಮುಗಿಸುತ್ತೇನೆ.

**—ಜಿ. ಬಿ. ಜೋಶಿ.**

# ಅರ್ಪಣ



ದಿವಂಗತ

ಡಾಕ್ಟರ್ ವಾಸುದೇವರಾವ ಉಮಚಗಿ

ಇವರ

ಕಟುಮಧುರ ತತ್ತ್ವನಿಷ್ಠ ಜೀವನದ

ನೆನಪಿಗೆ



ಕವಿಯ ಸೋಲಿನಲ್ಲಿ ಪಾತ್ರವಹಿಸಿದ
ಬಾಗಿಲುಕೋಟೆಯ ವಾಸುದೇವ ವಿನೋದಿನಿ ನಾಟಕ ಸಭೆಯ ಸದಸ್ಯರು

# ಕವಿಯ ಸೋಲು

"ಒಬ್ಬ ಸಂಸಾರಿಕನಾದ ಸಾಹಿತಿಯು
ಒಂದು ಕವನವನ್ನು ಒಂದೇ ದಿನದಲ್ಲಿ
ಕಟ್ಟಿ ಮುಗಿಸಲು ಪ್ರಯತ್ನಿಸಿ,
ಆಗದ್ದಕ್ಕೆ ನಿರಾಶನಾಗುವ ಬಗೆ"

೧-೫-೧೯೪೨

ವಿಷಯ ಕೊಟ್ಟದ್ದು . . ಸಂಜೆ ಐದು ಗಂಟೆಗೆ
ಅಭಿನಯ ಪ್ರಾರಂಭ . ರಾತ್ರಿ ಒಂಬತ್ತು ಗಂಟೆ
ಅಭಿನಯಿಸಿದ ವೇಳೆ . . ೨೫ ನಿಮಿಷ ಮಾತ್ರ

## ಪಾತ್ರಗಳು



ಶ್ರೀಪತಿ . . . . . . . ಕವಿ

ಶಾರದೆ . . . . ಕವಿಯ ಹೆಂಡತಿ

ಯಮುನಕ್ಕ . . ಕವಿಯ ಅಕ್ಕ, ವಿಧವೆ

ಶ್ರೀನಿವಾಸಾಚಾರ್ಯ . ದೇಶಾವರಿ ಬ್ರಾಹ್ಮಣ

ವೆಂಕಣ್ಣನಾಯಕ. ಶ್ರೀಪತಿ ಇದ್ದ ಮನೆಯ ಮಾಲಕ

ಅಭಿನಯಿಸಿದವರು:
ಬಾಗಿಲುಕೋಟೆಯ ವಾಸುದೇವ ವಿನೋದಿನಿ ನಾಟಕ ಸಭೆಯವರು

## ಪಾತ್ರವಹಿಸಿದವರು



ಶ್ರೀಪತಿ . ಶ್ರೀ. ಹಣಮಂತರಾವ ಬೆಣ್ಣೂರ

ಶಾರದೆ . . . ಶ್ರೀ. ನರಸಿಂಹ ಮಳಗಿ

ಯಮುನಕ್ಕ . ಶ್ರೀ. ವೆಂಕಟರಾವ ಮಿರ್ಜಿ

ಶ್ರೀನಿವಾಸಾಚಾರ್ಯ. ಶ್ರೀನಿವಾಸ ಪರ್ವತಿ

ವೆಂಕಣ್ಣನಾಯಕ . ಶ್ರೀ. ವೆಂಕಣ್ಣ ಮಿರ್ಜಿ

## ದೃಶ್ಯ

[ಶ್ರೀಪತಿಯ ಮನೆಯ ಪಡಸಾಲೆ ಆಧುನಿಕ ಕನ್ನಡ ಗಣ್ಯಸಾಹಿತಿಗಳ ಛಾಯಾ ಚಿತ್ರಗಳು ಗೋಡೆಗಳನ್ನಲಂಕರಿಸಿವೆ. ಒಂದು ಮೇಜು; ಮೇಜಿನ ಹತ್ತಿರ ಎರಡು ಮೂರು ಕುರ್ಚಿಗಳು. ಮೇಜಿನ ಮೇಲೆ ಕನ್ನಡ ಪುಸ್ತಕ ತುಂಬಿದ ಒಂದು 'ಶೆಲ್ಫ್' ಒಂದು ಕಡೆಗೆ, ವರ್ತಮಾನಪತ್ರ ಇನ್ನೊಂದು ಕಡೆಗೆ, ಎದುರಿಗೆ ಸುಂದರ ಸುಳಿಗಳಲ್ಲಿ ಕೂಡಿಸಿದ ಎರಡು ಫೋಟೊ—ತನಗೆ ತೀರ ಬೇಕಾದವರೆಂದು ತೋರಿಸುವುದಕ್ಕಾಗಿ ಅವಕ್ಕೆ ಈ ಮಹತ್ವದ ಸ್ಥಾನ ದೊರಕಿದೆ ಅದರ ಹತ್ತಿರವೆ ಬರೆಯುವ ಸಾಮಗ್ರಿ ಎಲ್ಲ ಸಿದ್ಧವಾಗಿದೆ.

ಶ್ರೀಪತಿಯು ವಿಚಾರದಲ್ಲಿ ತಲ್ಲೀನನಾಗಿ ಅಲ್ಲಿಯೆ ಅತ್ತಿಂದಿತ್ತ ತಿರುಗಾಡುತ್ತಿದ್ದಾನೆ. ವಿಚಾರದ ಆವೇಶವೆಲ್ಲ ಮುಖದ ಮೇಲೆ ಮೂಡಿ ಮರೆಯಾಗುತ್ತಿದೆ. ಶ್ರೀಪತಿ ತರುಣ. ಹಿಕ್ಕಿ ಮಿಂಚುವ ಕ್ರಾಪು ತಲೆಯ ಮೇಲೆ. ಮೀಸೆಯಿಲ್ಲದ ಮುಖ. ಮೈಮೇಲೆ ಅರ್ಧಂಗಿ. ಅದರ ಕಿಸೆಯಲ್ಲಿ 'ಫೌಂಟನ್ ಪೆನ್'. ಮುಂಗೈಗೆ ಗಡಿಯಾರ. ಬೆರಳ ನಡುವೆ ಸಿಗರೇಟು.]

**ಶ್ರೀಪತಿ:**—(ಸಿಗರೇಟು ಸೇದಿ ಹೊಗೆ ಬಿಟ್ಟು, ಹೊಗೆಯನ್ನು ನೋಡುತ್ತ) ಹಂ! ಹೊಳೆಯಿತು....ಕಾರ್ಮೋಡಗಳು....ಗುಡುಗು..ಮಿಂಚು.. ಮಳೆ....ಇದೆಲ್ಲ ಕೂಡಿದ ಕವನ! (ಕಾವ್ಯನಿರ್ಮಾಣಕ್ಕೆ ತೊಡಗುವನು) 'ಖಟ್ ಖಡಲ್ ಎಂದು ಖಟ್ ಖಡಲ್ ಎಂದು, ಕಾರ್ಮೋಡಗಳು ಉಸಿರುತಿರೆ' (ಎರಡು ಮೂರು ಸಲ ಇದನ್ನೆ ಉಚ್ಚರಿಸಿ) ಛೇ! ಎಲ್ಲಾ ಮಹಾಪ್ರಾಣಗಳು! ಕೇಳಿದವರ ಪಂಚಪ್ರಾಣ ಹಾರಿಹೋದಾವು....ಉಹುಂ, ಇದು ಬೇಡ. ರಮ್ಯವಾದುದನ್ನು ವರ್ಣಿಸಬೇಕು. ಒಳ್ಳೇದು..(ಅತ್ತಿತ್ತ ತಿರುಗುತ್ತ) ಹಂ! ಸಿಕ್ಕಿತು, ಸರಿಯಾದ ವಿಷಯ. 'ಸಾಯಂಕಾಲ....ಸೂರ್ಯಾಸ್ತ.... ಹೊಂಬಣ್ಣದ ಕಿರಣಗಳು..' (ಯೋಚಿಸುತ್ತ) 'ದೇವರವಿ ಗಮಿಪಸಸ್ತಾಚಲಕೆ। ದೇವಿಸಂಧ್ಯಾ ಸಂತೋಷಿಪುದೇಕೆ' (ಒಂದೆರಡು ಸಲ ಅಂದದ್ದನ್ನೆ ಅಂದು) ಛೇ! ಹಳೆಯ ಮಾದರಿಯಾಯಿತು ಇದು! ಈಗಿನವರಿಗೆ ಇದು ರುಚಿಸುವುದಿಲ್ಲ. ವರಿಗೆ ಕಂಡದ್ದನ್ನು ಕಂಡಹಾಗೆಯೆ ಹೇಳಬೇಕು. ಹಾಗಾದರೆ ಯಾವ ಷಯ ಆರಿಸಿಕೊಳ್ಳಲಿ? (ಶರ್ಟಿನ ಗುಂಡಿಯ ಹತ್ತಿರಿದ್ದ ಫೌಂಟನ್ ಪೆನ್ ನೋಡಿ) ಂ! ನಾನೀಗ ಕಂಡದ್ದು ಇದನ್ನು. ಇದರ ಮೇಲೆಯೆ ಕವನ ಕಟ್ಟಿದರಾಯಿತು.

(ಯೋಚಿಸಿ) ಛೇ ! ಇದೂ ಬೇಡ. ಏನೋ ಈ ದಿನ ನನ್ನ ಮೆದುಳಿನ ಮೇಲೆ ಆಲಸ್ಯದ ಪರೆ ಬಂದಿರಬಹುದೇನು ? ವಿಚಾರ-ಝರಿಯು ನಿರರ್ಗಳವಾಗಿ ಮುಂದೆ ಹರಿಯುದಾಗಿದೆ. . . . (ಸಿಗರೇಟು ಹೊತ್ತಿಸುತ್ತ) ಅದಕ್ಕೆ ಒಂದಿಷ್ಟು 'ಗ್ಯಾಸ್ ಪ್ರೆಶ್ಶರ್' ಕೊಡೋಣ, ಅಂದರೆ ಮುಂದೆ ಸುಗ್ಗುತ್ತದೆ. . . . (ವಿಚಾರದಲ್ಲಿ ಸಿಗರೇಟಿಗೂ ಬೆಂಕಿ-ಕಡ್ಡಿಗೂ ಸಂದರ್ಶನವೇ ಆಗದೆ ಕೈ ಸುಟ್ಟಾಗ ಎಚ್ಚರಗೊಂಡು) ಹಂ ! ಹಂ !! ಕಾವ್ಯಸಮಾಧಿಗೆ ಒಯ್ಯುವ ಈ ಸಿಗರೇಟಿನ ಮೇಲೆಯೇ ಏಕೆ ಬರೆಯಬಾರದು ? (ಕುರ್ಚಿಯ ಮೇಲೆ ಕುಳಿತು, ಮನಸ್ಸಿನಲ್ಲಿ ಓಡಾಡುತ್ತಿದ್ದ ವಿಚಾರಗಳನ್ನು ಮುಖದ ಮೇಲೆ ತೋರ್ಪಡಿಸುತ್ತ, ಕಳ್ಳದನಿಯಲ್ಲಿ ಮೊದಲು ಸುರುವು ಮಾಡಿ ಆಮೇಲೆ ಗಟ್ಟಿಯಾದ ದನಿಯಲ್ಲಿ) 'ಸಂತಸದಿ ಝುರುಕಿಯನು ಎಳೆಯೆ, ಹೊಗೆಯು ಸುರಳಿಸುರಳಿಯಾಗಿ ಹರಿಯೆ' (ಈ ಸಾಲುಗಳನ್ನೆ ತಿರು ತಿರುಗಿ ಬೇರೆ ಬೇರೆ ಭಾವಗಳಲ್ಲಿ ಅನ್ನುತ್ತಿರುವಾಗ ಶಾರದೆಯು ಪ್ರವೇಶಿಸುವಳು.)

**ಶಾರದೆ:**—(ಗಂಡನ ಕಡೆಗೆ ನೋಡದೆ ತನ್ನಲ್ಲಿಯೆ) ದಿನಾಲು ಆ ಕವಿತಾ ಈ ಕವಿತಾ ಅಂತ ಕಟಿಗೋತ ಕೂಡತಾರ. ಅದರಿಂದರೆ ಏನೂ ಫಾಯಿದೆ ಇಲ್ಲ, ಪುರುಷಾರ್ಥ ಇಲ್ಲ ಹೀಂಗಂತ ಹೇಳಿದರೂ ಕೇಳೂದಿಲ್ಲ ಮನೀ ಸಂಸಾರದ ಕಡೆಗೆ ಲಕ್ಷ್ಯಾನs ಇಲ್ಲ. ಚಪಲಹಾರ ಮಾಡಿಸಿಕೊಡರಿ ಅಂತ ಎಷ್ಟುಸಾರೆ ಹೇಳಿದರೂ ದಾದs ಇಲ್ಲ. (ಶ್ರೀಪತಿಗೆ ತಿಳಿಯದಂತೆ ಮೇಜಿನ ಮೇಲಿನ ಸಂಯುಕ್ತ ಕರ್ನಾಟಕವನ್ನು ತಗೆದುಕೊಂಡು ಮೆಲ್ಲಗೆ ಅದನ್ನು ನೋಡುತ್ತ) ಅವ್ವ ! ಇದೂ ಒಂದು ಸೆಟ್ಟಾಗs ಆಯಿತು. ಇವರಿಗೆ ಬರೆಯೋದೂ ಸಿಕ್ಕಂಗಾಯ್ತು, ನನಗ ಚಪಲಹಾರಾನೂ ಸಿಕ್ಕ್ಯಾಂಗಾಯ್ತು (ಶ್ರೀಪತಿಯ ಕಡೆಗೆ ನೋಡಿ)ಅಲ್ಲ, ಇದನ್ನ ನೋಡೀರೇನೂ ಅಂದೆ ? (ಶ್ರೀಪತಿಯು ಉತ್ತರ ಕೊಡದೆ ತನ್ನ ವಿಚಾರದಲ್ಲಿಯೆ ಇದ್ದುದನ್ನು ನೋಡಿ) ಏನು, ಬಹಳ ವಿಚಾರದಾಗ ಮುಣುಗಿದ್ಹಾಂಗ ಕಾಣಸ್ತದs ?

**ಶ್ರೀಪತಿ:**—(ಹೊಗೆ ಬಿಡುತ್ತ) ಸಂತಸದಿ ಝುರುಕಿಯನು ಎಳೆಯೆ. . . .

**ಶಾರದೆ:**—(ಗಟ್ಟಿಯಾದ ದನಿಯಲ್ಲಿ) ಏನದು ಏನದೂ ? ಇನ್ನೊಮ್ಮೆ ಅನ್ನರಿ ನೋಡೋಣ ! ಅಹಹಹ ಏನು ವಿಚಾರೊ ಏನೋ !

**ಶ್ರೀಪತಿ:**—(ಹೆಂಡತಿಯನ್ನು ನೋಡಿ ಕಕ್ಕಾವಿಕ್ಕಿಯಾಗಿ) ಅಂ, ಅಂಹ; ಏನೂ ಇಲ, ಏನೂ ಇಲ. ಏನಂದಿ ?

**ಶಾರದೆ:**—ಏನೂ ಇಲ್ಲ, ಆಗಳೆ ಏನೋ ಅಂದಿರಲ್ಲ, ಏನದೂ ?

**ಶ್ರೀಪತಿ**—ಅದs, ಇಲ್ಲಿ ನೋಡು ಈ ಸಿಗರೇಟು ಸೇದಿದ್ದರಿಂದ ನನಗೆ ಕಾವ್ಯಸ್ಫೂರ್ತಿ ಬಂತು. ಕಾವ್ಯಕ್ಕ ಸ್ಫೂರ್ತಿ ಕೊಡುವ ಈ ಸಿಗರೇಟಿನ ಮೇಲೇ ಕವನ ಕಟ್ಟುತ್ತಿದ್ದೆ. ಹಂ, ತಡೆ. (ಅದೇ ಸಾಲುಗಳನ್ನು ಮತ್ತೆ ಅನ್ನುವನು)

**ಶಾರದೆ:**—ಅಯ್ಯ! ಇದೇಸಿದೂ ಬೇಕಬೇಕಾದ್ದರ ಮ್ಯಾಲೆ ಕವಿತಾ ಕಟ್ಟೋದೇನು? ಏನಾರೆ ಚಲೋ ಉಪಯೋಗ ಬೀಳುವ ಸಾಮಾನದ ಮ್ಯಾಲರೆ ಕಟ್ಟಿದರ ಚಿಂತಿಲ್ಲ. ಏನ ಈಗಿನ ಕವಿಗಳೋ ಏನೋ! ಕಾಗೀ ಮ್ಯಾಲೆ, ಗುಬ್ಬಿ ಮ್ಯಾಲೆ. ಬೀಡಿ ಸಿಗರೇಟಿನ ಮ್ಯಾಲೆ ಕವಿತಾ ಕಟ್ಟೋದs? ಇನ್ನೂ ನನ್ನ ಪುಣ್ಯಾ, ಚಪ್ಪಲೀ ಮ್ಯಾಲೆ ಕಟ್ಟಲಿಲ್ಲಾ !

**ಶ್ರೀಪತಿ:**—ಅದ್ಯಾಕ, ಚಪ್ಪಲೀ ಮ್ಯಾಲೂ ಬರದಾರ, ದಿನಕರ ದೇಸಾಯಿ ಅಂಬೋರು.

**ಶಾರದೆ:**—ತೀರಿ ಹೋಯಿತು; ಅದೂ ಬಂದು ಹೋಯಿತs! ಆಗಲಿ, ಏನೇನು ಕಾಣಬೇಕಾಗೇದೊ ಈ ಕಣ್ಣು! ಆಯಿತು, ಹಂಗಾರ ಬರೆಯೋದು ಬರೀತಿರಿ, (ಸಂಯುಕ್ತ ಕರ್ನಾಟಕವನ್ನು ತೋರಿಸಿ) ಇದರಾಗ ಬಂದ ಜಾಹೀರಾತು ನೋಡಿ ಅದಕ್ಕಾರs ಬರೆದರ ಒಂದು ಉಪಯೋಗಾದರೂ ಆದೀತು ಈ ಸಿಗರೇಟಿನ ಮ್ಯಾಲ ಬರೆದರ ಏನ್ಸಿಗ್ತದ ಮಣ್ಣು. ಅದೇನು ಹೊಟ್ಟೆಗೆ ಹಾಕ್ತsದ, ನೆತ್ತಿಗೆ ಹಾಕ್ತsದs ?

**ಶ್ರೀಪತಿ:**—(ಸಂಯುಕ್ತ ಕರ್ನಾಟಕವನ್ನು ಇಸಿದುಕೊಂಡು ನೋಡುತ್ತ) ಅದರಾಗ ಏನು ಬಂದದ ಮತ್ತ ?

**ಶಾರದೆ:**—ಕವಿತಾ ಕಟ್ಟಿದವರಿಗೆ ಎರಡು ನೂರು ರೂಪಾಯಿ ಬಹುಮಾನ ಅಂತ.

**ಶ್ರೀಪತಿ:**—(ಲಕ್ಷ್ಯವಿಲ್ಲದೆ) ಅಲ್ಲs, ಹಣದಾಸೆಗೆ ಕವಿತಾ ಕಟ್ಟುವವ ನಾನಲ್ಲ. ಏನು ಹುಚ್ಚೇ ನೀನು; ಸ್ಫೂರ್ತಿ ರೊಕ್ಕ ಕೊಟ್ಟರ ಬರೂದಿಲ್ಲ. ಅದು ಒಳಗಿನಿಂದ ತಾನs ಚಿಮ್ಮಿ ಬರಬೇಕು ಚಿಮ್ಮಿ. ಆಗ ನೋಡು ಕವಿತಾದ ಸೂರ! ಇಂಥಾ ಈ ಬಹುಮಾನಕ್ಕ ಬಾಯಿ ತಗದು ಕವಿತಾ ಬರೆಯೊ ಮಬ್ಬ ಅಲ್ಲ ನಾನು.

**ಶಾರದೆ:**—ಸಾಕು, ಸಾಕು. ನಿಮ್ಮದೂ ಒಂದು ಮಾತss ರೊಕ್ಕಾ ಅಂದರ ಜೀವಿಲ್ಲದ ಗಂಟೀ ನಾಲಗಿ ಬಡಕೋತದಂತ, ಇನ್ನ ಮನುಷ್ಯಾನ ನಾಲಗಿ ಕುಣೀಲಾರದss ? ಹೆಂಗಸರ ಮಾತೂ ಅಂದರ ನಿಮಗ ಯಾವಾಗಲೂ ಹೀಂಗss; ಏನಾರೆ ಹೇಳಿದರ ಏನಾರೆ ಉತ್ತರ ಕೊಟ್ಟುಬಿಡೋದು. ಅಲ್ಲಾ, ಚಪಲಹಾರ ಮಾಡಸಿಕೊಡ್ರೀ ಅಂತ ನಿಮಗ ದುಂಬಾಲಬಿದ್ದು ಎಷ್ಟು ದಿನಾ ಆಯ್ತು ಹೇಳ್ರಿ ನೀವss? ಕೇಳಿದ ಸರ್ತಿಗೊಮ್ಮೆ 'ನನ್ನ ಹತ್ತಿಲೆ ದುಡ್ಡು ಇಲ್ಲಾ' ಅಂತ ಕೈ ಝಾಡಸ್ತೀರಿ, ಏನು ಮಾಡಬೇಕು ? (ಅಳುಮೋರೆ ಮಾಡಿ ನಿಲ್ಲುವಳು)

**ಶ್ರೀಪತಿ:**—ಅಹಾ, ಹಿಂಗ ಮಾರಿ ಮಾತ್ರ ಮಾಡಬ್ಯಾಡ ನೋಡು. ಏನಂತೀದಿ ಹೇಳ್ಬೇಕಾದರೆ ಹೇಳು ?

**ಶಾರದೆ.**—ನೀವೀಗ ಅದರೊಳಗ ಬೇಡಿದ್ದಂಗ ಕವಿತಾ ಕಟ್ಟಬೇಕು, ನಿಮಗss ಆ ಬಹುಮಾನ ಸಿಗಬೇಕು, ಅದನ್ನss ತಗೊಂಡು ನಾನು ಚಪಲ ಹಾರ ಮಾಡಿಸಿಕೋಬೇಕು ಅಂತೀನಿ.

**ಶ್ರೀಪತಿ**—ಹೂಂ. (ಸಂಯುಕ್ತ ಕರ್ನಾಟಕವನ್ನು ಓದುತ್ತ) 'ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವದ ಅಧ್ಯಕ್ಷರು ಶ್ರೀನಿವಾಸರು. ಈ ಉತ್ಸವಕ್ಕ ತಕ್ಕ ಸ್ವಾಗತಪದ್ಯವನ್ನು ರಚಿಸಿ ಕಳಿಸಿದವರಲ್ಲಿ ಮೊದಲನೆ ನಂಬರು ಬಂದವರಿಗೆ ಎರಡು ನೂರು ರೂಪಾಯಿಗಳ ಬಹುಮಾನ.' ಇಷ್ಟೇ ಹೌದಲ್ಲೋ. ಆಗಲಿ. (ಬಹಳ ಉತ್ಸಾಹದಿಂದ ಕುರ್ಚಿಯ ಮೇಲೆ ಕುಳಿತುಕೊಳ್ಳುವನು)

**ಶಾರದೆ:**—ಮುಂದೆ ನೋಡಿದಿರೋ ಇಲ್ಲೋ. ಇವತ್ತೇ ಕಡೆಯ ತಾರೀಖು. ಸಂಜೆಯೊಳಗಾಗಿ ಟಪಾಲಿಗೆ ಹಾಕಬೇಕು. ನೀವೇನು ಸಿಗರೇಟು ಸೇದಿಕೋತ ಅದರ ಹೊಗೀ ಮ್ಯಾಲ ಕೂತುಕೊಂಡು ಸವಾರಿಗೆ ಹೊರಟರೀಂದ್ರ, ಹಗಲು ಯಾವದೋ ರಾತ್ರಿ ಯಾವದೋ ನಿಮಗ ಪತ್ತೇನೇ ಆಗೂದಿಲ್ಲ. ಅದಕ್ಕ ಮೊದಲಿಗೆ ಅದನ್ನ ಬರೆದು ಮುಗಿಸಿರೀ ಅಂತೀನಿ

**ಶ್ರೀಪತಿ.**—ಹೌದು, ಅದೆಲ್ಲ ಖರೆ ಆದ. ಆದರ ಸ್ಫೂರ್ತಿ ಬರಬೇಕಲ್ಲ ಸ್ಫೂರ್ತಿ ?

**ಶಾರದೆ:**—ಅದಕ್ಕೇನು ಮಾಡಬೇಕಿನ್ನ ?

**ಶ್ರೀಪತಿ:**—ಇಷ್ಟೂ ತಿಳಿವಲ್ಲದss. ಒಂದು ಕಪ್ಪು First class ಕೆ. ಟಿ.

ಚಹಾ ಬಂತಂದರ ನೋಡು, ಆರ್ಧಾ ತಾಸಿನೊಳಗ ಕವಿತಾ ಹೊರಬಿತ್ತಂತ ತಿಳಕೊ.

**ಶಾರದೆ.**—(ವೈಯ್ಯಾರದಿಂದ, ಉಬ್ಬಿನಿಂದ ಒಳಕ್ಕೆ ಹೋಗಿ ಮುಖ ಸಪ್ಪಗೆ ಮಾಡಿಕೊಂಡು ಮರಳಿ ಬಂದು) ಚಹಾಕ್ಕ ಸಕ್ಕರೀನೇ ಇಲ್ಲಾ.

**ಶ್ರೀಪತಿ.**—ಸಕ್ಕರೀನೇ ಇಲ್ಲs! ಆಯಿತು ಇನ್ನ ನಮ್ಮ ಕವಿತಾನೂ ಸಪ್ಪಗs. ಕಿಸೆದೊಳಗ ಒಂದು ದುಡ್ಡೂ ಇಲ್ಲ ಕಾಣಸ್ತದ.

**ಶಾರದೆ**—ಇಲ್ಲದಿದ್ದರ ಇಲ್ಲ. ನಾನೇ ಮಂಗ್ಗಲ ಮನೀಗೆ ಹೋಗಿ ಸ್ವಲ್ಪ ಕಡಾ ತಂದು ಮಾಡತೀನಿ. ಅಲ್ಲೀ ತನಕಾ ಅಂದ್ರ ಕವಿತಾ ಒರೆದು ಮುಗಿಸಿಬಿಡ್ರಿ.... ಇಕಾ, ನಿಮಗ ಬಂದ ಆ ಎರಡು ನೂರು ರೂಪಾಯಿ ನನ್ನವು ಮತ್ತೆ. (ಹೋಗುವಳು)

**ಶ್ರೀಪತಿ.**—(ಕುರ್ಚಿಯ ಮೇಲೆ ಬರೆಯಲು ಸಜ್ಜಾಗಿ, ಮತ್ತೊಮ್ಮೆ ಆ ಜಾಹೀರಾತನ್ನು ಓದುವನು) ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವ. ಶ್ರೀ. ಶ್ರೀನಿವಾಸರು ಅಧ್ಯಕ್ಷರು. ಸ್ವಾಗತ ಪದ್ಯ! ಸರಿ.. 'ಸ್ವಾಗತವು ಸ್ವಾಗತವು ಶ್ರೀನಿವಾಸರಿಗೆ' (ಒಂದೆರಡು ಸಲ ಇದನ್ನೆ ಅನ್ನುತ್ತಿರುವಷ್ಟರಲ್ಲಿ ಶ್ರೀಪತಿಯ ಅಕ್ಕ ಬರುವಳು)

**ಯಮುನಕ್ಕ**—ಶ್ರೀಪತಿ, ಏ ಶ್ರೀಪತೀ! (ಶ್ರೀಪತಿಯು ತನ್ನ ಕಾವ್ಯದ ಗುಂಗಿನಲ್ಲಿ ಅತ್ತ ನೋಡುವುದಿಲ್ಲ) ಈಗಿನ ಮಂದೀನೇ ಒಂದು ಧರಾ! ನೋಡಿದಾಗೆಲ್ಲ ಹೊಗಿ ಬಿಡೂದು, ಏನಾರ ಬರಕೋತ ಕೂಡೂದು. ಮನ್ಯಾಗ ಏನು ನಡದದ, ಏನು ಇಲ್ಲ, ಏನು ಅದ, ಒಂದರೆ ನೋಡತಾನs ಮಹರಾಯಾ! ಗಂಡ ಹ್ಯಾಂಗ, ಹಾಂಗ ಹೆಂಡ್ತಿ. ಬೇಶ್ ಕೂಡಿಸ್ಯಾನ ಬ್ರಹ್ಮ ಈ ಜೋಡೀನ! ಆಗಲಿ, ನಮಗರೆ ಯಾಕ ಬೇಕು ಉಳಿದ ಪಂಚೇತಿ. ಬಂದ ಕೆಲಸ ಎಷ್ಟು ಅಷ್ಟು ಕೇಳಿದರಾತು. (ಒಂದೆರಡು ಹೆಜ್ಜೆ ಮುಂದೆ ಬಂದು ಶ್ರೀಪತಿಯನ್ನು ದಿಟ್ಟಿಸಿ) ಶ್ರೀಪತಿ, ಏ ಶ್ರೀಪತೀ! ಏನ ನಡಿಸೀಯಪ ಇದನ್ನ?

**ಶ್ರೀಪತಿ:**—ಏನೂ ಇಲ್ಲ ಅಕ್ಕಾ. ಏನೋ ಒಂದು ಕವಿತಾ ಬರದರ ಎರಡು ನೂರು ರೂಪಾಯಿ ಬಹುಮಾನ ಅಂತ. ಅದಕ್ಕಾಗಿ ನಡಿಸೀನಿ.

**ಯಮುನಕ್ಕ:**— ಹೀಂಗs! ಎರಡು ನೂರು ರೂಪಾಯಿ ಸಿಗತಾವs! ಅಯ್ಯ ಖೋಡೀ! ಹಂಗಾರ ಶ್ರೀಪತಿ, ಅನಾಯಸ ಊರೊಳಗ ಶ್ರೀಗಳವರು

**ಶ್ರೀಪತಿ:**—(ನಗುತ್ತ) ಅಯ್ಯೋ ಮಹರಾಯಾ! ಶ್ರೀನಿವಾಸ ಅಂದರ ನೀನಲ್ಲ; ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವದಲ್ಲಿ ಅಧ್ಯಕ್ಷರಾಗಿ ಬರುವ ಶ್ರೀನಿವಾಸರು; ಅಂದರೆ ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರು. ತಿಳಿಯಿತೇನು?

**ಶ್ರೀನಿವಾಸ**—ಮಾಸ್ತಿಯವರ್ರೀ, ಬೆಳಗಾಂವಿ ಸಾಹಿತ್ಯಸಮ್ಮೇಲನಕ್ಕೆ ಬಂದಿದ್ದರು? ಅವರು ಲೆಕ್ಚರು ಹ್ಯಾಂಗ ಕೊಡತಾರ ಅಂದ್ರೀ....!

**ಶ್ರೀಪತಿ:**—ಮಹರಾಯರs ಈಗ ನಿಮ್ಮ ಲೆಕ್ಚರಂತೂ ಸಾಕುಮಾಡಿರಿ. ದಯಮಾಡಿ ಬಂದ ಹಾದಿ ಹಿಡಿದು ಹೋಗರಿ. ನನಗಿಷ್ಟು ಈಗ ಜರೂರ ಕೆಲಸ ಅದ. ಇದನ್ನು ಮುಗಿಸಿ ಈಗಿಂದೀಗ ಟಪಾಲಿಗೆ ಹಾಕಬೇಕಾಗಿದೆ.

**ಶ್ರೀನಿವಾಸ.**—ಏನದು ರಾಯರ?

**ಶ್ರೀಪತಿ**—ಏನೂ ಇಲ್ಲ, ಒಂದು ಕವಿತೆ.

**ಶ್ರೀನಿವಾಸ:**—ರಾಯರು ಕವಿತಾ ಕಟ್ಟತೀರೇನು? (ಬಾಗಿ ಬರೆದದ್ದನ್ನು ಓದಲು ಹವಣಿಸುವನು) ರಾಯರ, ನಿಮ್ಮ ಅಕ್ಷರೇನು ಮುತ್ತಿನಾಂಗ ಅವರೀ! ಕವಿತಾ ಏನೊ ಬಹಳ ಸರಸ ಇದ್ದಾಂಗ ಕಾಣಸತದ ರಾಯರs!

**ಶ್ರೀಪತಿ.**—ನಿಮ್ಮ ಸರ್ಟಿಫಿಕೇಟು ಸಿಕ್ಕಿತಿಲ್ಲೊ, ಇನ್ನು ಬಹುಮಾನದ ಆವಶ್ಯಕತೆ ಉಳಿಲೇ ಇಲ್ಲ. ಅದಿರಲಿ, ನಿಮ್ಮ ಕೆಲಸ ಏನು? ನೀವು ಯಾಕ ಬಂದೀರಿ? ನೀವು ಯಾರು? ನಿಮ್ಮ ಕೆಲಸ ಏನಾದರೂ ಇದ್ದರ ತೀವ್ರ ಮುಗಿಸಿಕೊಂಡು ಹೊರಡರಿ.

**ಶ್ರೀನಿವಾಸ:**—ಅಲ್ಲ ರಾಯರ, ಅದೇನಾರ ಇರಲಿ ಬಿಡರಿ. ಈಗಿನ ಮಂದೀ ಕವಿತಾನ ನನ್ನ ಮನಸ್ಸಿಗೆ ಬರೂದಿಲ್ಲ ನೋಡ್ರಿ ರಾಯರ. ನಿಮ್ಮ ಧರತೀ ನೋಡಿದರ ಜೈಮಿನಿಭಾರತದ್ಹಾಂಗ ಅದ. ಅಲ್ಲ ರಾಯರ, ಈಗಿನ ಕವಿಗಳು ಏನ ಕವಿತಾ ಬರೀತಾರ ಅಂತೀರಿ—'ಹಕ್ಕಿ ಹಾರುತಿದೆ ನೋಡಿದಿರಾ!' ಅಂತ. ಇವರ ಕವಿತಾ ಓದಿದರ 'ನಮ್ಮ ಪ್ರಾಣ ಹಾರುತಿದೆ ನೋಡಿದಿರಾ!' ಅನಬೇಕಾಗತದ ನಾವು. ಇವೇನ್ರಿ, ಇವು ಕವಿತಾ ಏನು ಇವು? ಇನ್ನೂ ನೋಡಿಲ್ಲ ರಾಯರs ನೀವು. ಇನ್ನೊಬ್ಬವ ಬರದಾನ, ಅದನ್ನ ಓದಿ ನನಗ ಹುಚ್ಚನಗಿ ಬಂತೇನ್ರಪ. 'ಕರಿಮರಿ ನಾಯಿ ಕುಂಯಿಗುಡುತಿತ್ತು' ಅಂತ ನಾಯಿಯ ಮ್ಯಾಲ ಕವಿತಾನs? ಮತ್ತ ಇನ್ನೂ ಎಂಥೆಂಥಾವು ಅವ ಅಂದ್ರಿ–

‘ನೂಲೋಲ್ಯಾಕ ಜೆನ್ನೀ? ಕದರಿಲ್ಲೋ ಜಾಣಾ’ ಏನ್ರಿ ರಾಯರ, ಹೆಂಗಸರ ಹಾಡಿನಂಥಾವು ಇವು ಕವಿತಾನs? ಅದೇ ನಮ್ಮ ಲಕ್ಷ್ಮೀಶ ಕವಿ ಬರದಾನ ನೋಡ್ರಿ, ಅಂದ್ರ ದಿಕ್ಕು ತಪ್ಪಿ ಹೋಗಬೇಕು.

‘ತಲ್ಲಕ್ಷಣಂಗಳಿಂ ಸಲ್ಲಲಿತವಾದ ಹಯ।
ವಿಲ್ಲ ವಿಧಿವಶದಿಂದ ಮಿಲ್ಲದಿರ್ದೊಡೆ ಧರಾ।
ವಲ್ಲಭನ ರಂಜಿಸುವ ಮಲ್ಲಡಿಗಳಂ ಕಾಣಬಲ್ಲನೆ ಮಹೀತಳದೊಳು॥
ಎಲ್ಲಿರ್ದೊಡಾ ತಾಣದಲ್ಲ ಪೊಕ್ಕರಸಿ ತಂ।
ದಲ್ಲದನ್ನಯ ಭಾಷೆ ಸಲ್ಲದಿದಕೆಂತೆನುತೆ।
ಘಲ್ಲಿಸುವ ಚಿಂತೆಯಿಂ ನಿಲ್ಲದೆ ವೃಕೋದರಂ ತಲ್ಲಣಿ........’

**ಶ್ರೀಪತಿ:**— (ನಡುವೆಯೆ ನಿಲ್ಲಿಸಿ) ಸಾಕು, ಸಾಕು. ಏನ್ರಿ ಸ್ವಾಮಿ, ನಿಮ್ಮ ಕವಿತಾ ಗಡಗಿನಿಂದ ಹಿಡಿದು ಹುಟಗಿ ತನಕಾ ಅಂದರೂ ಮುಗಿಯೂ ಹಾಂಗ ಕಾಣಾಸೂದಿಲ್ಲ! ದುಡ್ಡು ಕೊಟ್ಟು ಹಚ್ಚಿ ಎರಡು ದುಡ್ಡು ಕೊಟ್ಟು ಬಿಡಿಸ ಬೇಕನ್ನೊ ಪೈಕಿ ಕಾಣಸತೀರಿ ನೀವು. (ಸಿಟ್ಟಿನಿಂದ) ಸುಮ್ಮನ ಹೊರಗ ಹೋಗತೀರೋ ಏನು ಅರ್ಧಚಂದ್ರಪ್ರಯೋಗ ಆಗಬೇಕೋ? ಬಹಳ ವಿಚಿತ್ರ ವ್ಯಕ್ತೀನs ಕಾಣಸತೀರಲ್ಲ!

**ಶ್ರೀನಿವಾಸ:**—ಹಾಂಗೇನಿಲ್ಲ ರಾಯರ. ನಮ್ಮ ಹುಡುಗನ ಮುಂಜ್ವಿ ತಿರುಪತ್ಯಾಗ ಮಾಡಬೇಕೂ ಅಂತ ಬೇಡಿಕೊಂಡೀವಿ. ಅದಕ್ಕ ತಮ್ಮಿಂದ ಏನಾದರೂ ಸಹಾಯ ಆದೀತು ಅಂತ....

**ಶ್ರೀಪತಿ:**—ಏನ ಅಡ್ಡಿ ಇಲ್ಲ ಮಹಾಸ್ವಾಮಿ, ಬರ್ರಿ. ಏಕಾದಶೀ ಮನಿಗೆ ಗೋಕುಲಷ್ಟಮಿ ಬಂದ್ಹಂಗಾತು.

**ಶ್ರೀನಿವಾಸ**—ಏನ್ರಿ ರಾಯರ, ತಮ್ಮಂಥವರು ಹೀಂಗಂದರ?

**ಶ್ರೀಪತಿ:**—ಏನೂ ಇಲ್ಲ. ಈಗ ಯುದ್ಧದ ದಿವಸಾ. ಗಾಡಿಯಲ್ಲಿ ಜಾಗಾನೂ ಸಿಗೂದಿಲ್ಲ. ತಿರುಪತಿ ತನಕಾ ಹೋಗೋ ಶ್ರಮ ಯಾಕ ತಗೋತೀರಿ ಅಂತ.

**ಶ್ರೀನಿವಾಸ.**—ನನಗೆಲ್ಲಿ ಬೇಕಾಗಿತ್ತು ರಾಯರs, ನಮ್ಮಾಕಿ ಹಟಕೀ ಕಾಲಾಗ ಇಷ್ಟೆಲ್ಲ ಪೀಕಲಾಟ.

ಶ್ರೀಪತಿ:—(ಸ್ವಗತ) ಅಂತೂ ಈ ರಿಪಿ ಮುಹರಾಯು ನಮ್ಮ ಬೆನ್ನು ಡುವ ಲಕ್ಷಣವಿಲ್ಲ. ಏನು ಮಾಡಬೇಕಿನ್ನು? (ಪ್ರಕಾಶ) ಸ್ವಾಮಿ, ಈಗ ನ್ನ ಹತ್ತಿರ ದುಡ್ಡು ಇಲ್ಲ. ಇಲ್ಲಿ ನಿಮಗೇನೂ ಸಿಗುವದಿಲ್ಲ. ದಯಮಾಡಿ ೊರಡಿರಿ ಇನ್ನ. ಮಾತಾಡಲಿಕ್ಕೆ ನನಗ ಹೊತ್ತೂ ಇಲ್ಲ.

ಶ್ರೀನಿವಾಸ—ಇಷ್ಟ್ಯಾಕ ಸಿಟ್ಟು ರಾಯರ, ಹೋಗತೀನಿ, ನೀವು ಡಿದ್ದು ಕೊಡದಿದ್ದರ ಇಲ್ಲ. ಮತ್ತೇನಾದರ—(ಮೇಜಿನ ಮೇಲಿನ ಒಂದು ಸ್ತಕ ತೆಗೆದುಕೊಂಡು ಅದನ್ನು ಓದುತ್ತ ಕುರ್ಚಿಯ ಮೇಲೆ ಕುಳಿತು) ರಾಯರ! ರಮಪ್ಪನ ಭೂತ! ಜಾಗೀರದಾರರು ಬರದ ಹೊಸ ಪುಸ್ತಕ ಇದೇ ಏನ್ರಿ? ವರೂ ಏನ ಬರೀತಾರಂದ್ರೀ, ಥೇ, ಥೇ ಅವರು ಬರೆಯೋದೂ ಹಂಗೆ, ಾತಾಡೋದೂ ಹಂಗೆ, ನೋಡ್ರಿ.

ಶ್ರೀಪತಿ—(ಸಿಟ್ಟಿಗೆದ್ದು) ಅದು ಭರಮಪ್ಪನ ಭೂತಾ, ನೀನು ನನ್ನ ೂತಾ. ಹೋಗು ಮುಹರಾಯಾ, ಬೇಕಾದರ ಆ ಪುಸ್ತಕಾ ಸಹಿತ ತಗೊಂಡು ೋಗು. ದಯಮಾಡಿ ಮೊದಲ ಹೊರಡು

ಶ್ರೀನಿವಾಸ—ಥೇ ಥೇ ಹಂಗ್ಯಾಕ ರಾಯರ. ಅದನ್ಯಾಕ ಒಯ್ಯಲಿ. ಾಲ್ಕು ರಸ್ತೆ ಕೂಡಿದಲ್ಲೆ ಇಟ್ಟರೂ ಯಾರೂ ಒಯ್ಯೂದಿಲ್ಲ ಅದನ್ನ. ಾವೇನ್ರಪಾ ಹಳ್ಳಿಯವರು. ನಿಮ್ಮಿಂದ ಏನೋ ಸುದ್ದಿ ತಿಳಕೊಂಡು ೋಗಬೇಕೂ ಅಂತ—ಅಲ್ಲ ರಾಯರ, ಮೊನ್ನೆ ವಿಶಾಖಾಪಟ್ಟಣದ ಮ್ಯಾಲ ಾಂಬು ಬಿತ್ತಂತ? ಯುದ್ಧ ಅಗದೀ ಸಮಿಾಪಕ್ಕೇ ಬಂದ್ಹಾಂಗ ಆತೆರಪಾ!

ಶ್ರೀಪತಿ:—ಹೌದು ಹೌದು. ಮನ್ಯಾಗs ಬಂದು ನಿಂತದ. ಇನ್ನ ್ವಲ್ಪ ಹೊತ್ತಾದರ ನಿಮ್ಮ ತಲೀಮ್ಯಾಲs ಬಾಂಬು ಬೀಳತಾವ. (ಸ್ವಗತ) ಪೀಡಾ ಲಗೂ ಹೋಗೂ ಹಾಂಗ ಕಾಣಸೂದಿಲ್ಲ.

ಶ್ರೀನಿವಾಸ.—ಅಲ್ಲ ರಾಯರ, ಅದೇನು, ರಾಜಗೋಪಾಲಾಚಾರ್ಯರು ರ್ಕಿಂಗ್ ಕಮಿಟಿಗೆ ರಾಜೀನಾಮೆ ಕೊಟ್ಟರಂತ? ಗಾಂಧೀಗೆ ಅವರಿಗೆ ಡದಾಟ ಆತೇನ್ರಿ? ಅಲ್ಲ, ರಾಜಗೋಪಾಲಾಚಾರೀ ಅಂಥವರೇ ಕೂತು ಾಕಿಸ್ತಾನಾ ಕೊಡಬೇಕು ಅಂದರ ನಮ್ಮ–ನಿಮ್ಮಂಥವರ ಗತಿ ಏನ ಾಯರs?

ಶ್ರೀಪತಿ —ಅಧೋಗತಿ! ಅಲ್ಲ ಸ್ವಾಮಿ, ನನ್ನ ನೀವು ಏನಂತ ತಿಳಕೊಂಡೀರಿ? ನಾನೂ ನಿಮ್ಮಂತೆ ಒಬ್ಬ ಮನುಷ್ಯ. ನಾನೇನು ಸಾರ್ವಜನಿಕ ವಾಚನಾಲಯ ಅಲ್ಲ. . ಇಷ್ಟೆಲ್ಲ ಮಾಹಿತಿ ಬೇಕಾಗಿದ್ದರೆ ಹೋಗಿ ವರ್ತಮಾನ ಪತ್ರ ಕೊಂಡು, ಇಲ್ಲದಿದ್ದರ ಇನ್ನೊಬ್ಬರವರೊಳಗ ತಲಿ ಹಾಕಿ, ಓದಿರಿ. ಅದಕ್ಕೂ ಹೆಚ್ಚಿಗೆ ಬೇಕಾಗಿದ್ದರೆ ವರ್ಧಾಕ್ಕೆ ಹೋಗಿ ಗಾಂಧೀಜಿಯವರ ಭೆಟ್ಟಿಯಾಗಿ ಬರ್ರಿ; ಮದ್ರಾಸಕ್ಕೆ ಹೋಗಿ ರಾಜಾಜಿಯ ಭೆಟ್ಟಿ ಆಗಿ ಬರ್ರಿ. ಅಂದರ ಎಲ್ಲಾ ತಿಳೀತದ. ಹುಂ, ಇಲ್ಲಿಂದ ಮೊದಲ ಹೊರಡಿರಿ (ಕೈ ಹಿಡಿಯಲು ಹೋಗುವನು)

ಶ್ರೀನಿವಾಸ.—ಛೆ, ಛೇ! ಇಲ್ಲ ರಾಯರ! ಹೋಗತೀನಿ. ಹೋಗೋದಕ್ಕೇನೂ ಅಡ್ಡಿ ಇಲ್ಲ; ಆದರೆ ಮಧ್ಯಾಹ್ನದ ಹೊತ್ತು ಆಯ್ತು. ಇಲ್ಲೇ ಸ್ವಲ್ಪ ಭೋಜನ ತೀರಿಸಿಕೊಂಡು ಬಿಸಿಲು ತಗ್ಗಿದ ಮ್ಯಾಲ ಊರಿಗೆ ಹೋಗಬೇಕೂಂತ. ರಾಯರ, ತಮ್ಮ ಮನಸ್ಸು ದೊಡ್ಡದು ಏನ್ರಿಪಾ!

ಶ್ರೀಪತಿ —(ಸ್ವಗತ) ಛೆ ಛೇ! ಅಂತೂ ಈ ಆಸಾಮಿ ಅಶನ ಕೆಡ್ಡಿದ ಹೊರತು ನಮ್ಮಲ್ಲಿಂದ ಏನು ಕದಲೋಹಾಂಗ ಕಾಣೂದಿಲ್ಲ. (ಪ್ರಕಾಶ) ಆಗಲಿ, ಮಹರಾಯಾ. ಆದರೆ ನನಗೀಗ ಬಹಳ ಕೆಲಸ ಅದ. ಅದು ಮುಗಿಯೋ ತನಕ ಹೊರಗ ಹೋಗಿ ಬರ್ರಿ ಬೇಕಾದರೆ ಅಡಿಗಿಯಾದಮೇಲೆ ಕರೆಕಳಸತೀನಿ. ಕರೆಕಳಸದ ಜನರ ನೀವು ಒಳಗ ಬಂದರ, ಇವತ್ತ ಊಟ ಇಲ್ಲದನ ಹೋಗಬೇಕಾಗತದ ಗೊತ್ತಿರಲಿ!

ಶ್ರೀನಿವಾಸ.—ರಾಯರ, ನಾ ಹೇಳಿಲ್ರೆ ನಿಮ್ಮದು ದೊಡ್ಡ ಮನಸ್ಸು ಅಂತ. ನೀವು ಕರೆಯೋ ತನಕ ಹೊರಗೇ ಇರತೀನಿ. ಅಲ್ಲೀ ತನಕ ಓದಲಿಕ್ಕೆ ಈ ವರ್ತಮಾನಪತ್ರ ಇಷ್ಟು ಒಯ್ದಿರತೀನಿ ರಾಯರ, ಹಃ ಹಃ ಹಃ.

ಶ್ರೀಪತಿ —ಆಗಲಿ. ಸದ್ಯಕ್ಕೆ ಹೊರಗ ಹೋದರೆ ಸಾಕಾಗೇದ. (ಆಚಾರಿಯು ಹೋಗಿ ಬಂದು ಹೋಗಿ ಬಂದು ಕೊನೆಗೊಮ್ಮೆ ಹೋಗುವನು) ಉಶ್ಶ್! ಅಂತೂ ಶಾರದೆ ಯಾವ ಮುಹೂರ್ತದಲ್ಲಿ ಈ ಬಹುಮಾನಕ್ಕೆ ಆಸೆ ಮಾಡಿದಳೋ! ಕವಿತಾ ಮುಗಿಯುವಂತಿಲ್ಲ, ಬಹುಮಾನ ದೊರಕುವಂತಿಲ್ಲ; ಶಾರದೆಗೆ ಚಪಲಹಾರ ಕನಸಿನ್ಯಾಗಿನ ಗಂಟು! (ಶಾರದೆ ಚಹಾ ತೆಗೆದುಕೊಂಡು ಬರುವಳು)

**ಶಾರದೆ.**—ಇಕಾ, ಚಹಾ ತಂದೀನಿ ಅಂದೆ. (ಶ್ರೀಪತಿ ಕನಸಿನಿಂದ ಎಚ್ಚತ್ತವನಂತೆ ಎದ್ದು ನಿಲ್ಲಲು) ಕವಿತಾ ಮುಗೀತೇನು ?

**ಶ್ರೀಪತಿ:**—ಆಂ! ಕವಿತಾನs? ಹುಂ, ಮುಗೀತದ, ನನ್ನ ಅವತಾರ ಮುಗಿದ ಮ್ಯಾಲ! (ಕಪ್ಪು ತೆಗೆದುಕೊಂಡು) ಸುರುವು ಮಾಡೋದಕ್ಕೇ ನಮ್ಮ ಅಕ್ಕಾ, ಮಹಾರಾಯುಳು ಬಂದು ರಂಭಾಟ ಮಾಡಿ ಹೋದಳು. ಆಕಿ ಹೋಗೂದರಾಗs ಇನ್ನೊಂದು ಪೀಡಾ ಗಂಟುಬಿತ್ತು. ಹೀಂಗಾದರ ಏನ ಬರೀತಿನ ನನ್ನ ತಲಿ!

**ಶಾರದೆ.**—ಮತ್ತ್ಯಾರು ಬಂದರು ?

**ಶ್ರೀಪತಿ:**—ನೋಡು, ಅಲ್ಲಿ ಹೊರಗ ಕೂತಾನ. ನಿಮ್ಮ ಬೀಗರ ಪೈಕಿ ಕಾಣಸತಾನ. ಆಸಾಮಿ ಭಾರಿ ಅದ! ಕಡೀಕ ಊಟಾರೆ ಮಾಡಿ ಹೋಗ್ತೀನಿ ಅಂತ ಕೂತಾನ, ಕೂತರ ಕೂಡಲಿ. ಈಗ ನೀನು ಇಷ್ಟು ಮಾಡು. ನೀನೂ ಹೊರಗ ಹೋಗಿ ಕೂಡು. ಕವಿತಾ ಮುಗಿಯೋ ತನಕ ಯಾರನ್ನೂ ಒಳಗೆ ಬಿಡಬ್ಯಾಡ. ಯಾರು ಬಂದರೂ ಮನ್ಯಾಗ ಇಲ್ಲಾ ಅಂತ ಹೇಳಿಬಿಡು.

**ಶಾರದೆ**—ಆಗಲಿ, ಹಂಗೇ ಮಾಡತೀನಿ. (ಕಪ್ಪು ಇಸಿದುಕೊಂಡು) ಈ ಸಾರೆ ಮುಗಿಸಿಬಿಡಿರಿ ಮತ್ತೆ. (ಹೋಗುವಳು)

**ಶ್ರೀಪತಿ**—(ಕುರ್ಚಿಯ ಮೇಲೆ ಕುಳಿತು)

ಸ್ವಾಗತವು ಸ್ವಾಗತವು ಶ್ರೀನಿವಾಸರಿಗೆ।
ಸಾಹಿತ್ಯದಾಗಸದಿ ಹತ್ತೈದು ಹೊಸ ತಾರೆಗಳು ಮಿನುಗುತಿರೆ..

**ಶಾರದೆ.**—(ತೆರೆಯ ಮರೆಯಲ್ಲಿ) ಗಂಡಸರು ಮನ್ಯಾಗ ಇಲ್ಲಾ.

**ವೆಂಕಣ್ಣ:**—ಏನ್ರೀ, ದಿನಾ ಹೀಂಗs ಹೇಳ್ತೀರಿ. ಇವತ್ತ ಕೇಳೂದಿಲ್ಲ.

**ಶಾರದೆ**—ಮನ್ಯಾಗ ಇಲ್ಲರೀ.

**ವೆಂಕಣ್ಣ:**—ಅದನ್ನೇನು ಕೇಳೂದಿಲ್ಲ. (ಇಬ್ಬರೂ ಒಳಕ್ಕೆ ಬರುವರು) ಆಹಹ! ಏನ ರಾಯರ! ಅಂತೂ ಈ ದಿವ್ಸ ಮನ್ಯಾಗ ಸಿಕ್ಕಿರಿ! ನಾವು ಬರೂದು ನೀವು ಹೊರಗ ಹೋಗಿರೋದು ನಡದೇ ಇತ್ತು. ಎಷ್ಟು ತಿಂಗಳಾತು ರಾಯರ, ಮನೀ ಬಾಡಿಗೀ ಇಷ್ಟು ಕೊಟ್ಟುಬಿಡ್ರಿ.

**ಶ್ರೀಪತಿ.**—ಓಹೋ! ಏನ ನಾಯಕರ, ಬರ್ರಿ, ಕೂತುಕೊಳ್ಳಿರಿ. (ವೆಂಕಣ್ಣ ಕುರ್ಚಿಯ ಮೇಲೆ ಕೂಡುವನು) ಈಗ ಸ್ವಲ್ಪ ಅಡಚಣಿ ಒಳಗ ಇದ್ದೇನಿ. ಇಷ್ಟ

ದಿವಸ ಕೇಳೀರಂತ, ಇನ್ನಷ್ಟು ದಿವಸ ತಡೀರಿ. ನಿಮ್ಮ ಬಾಡಿಗಿ ಎಲ್ಲಾ ಚುಕ್ತಾ ಮಾಡತೀನಿ.

**ವೆಂಕಣ್ಣ:**—ನಿಮ್ಮ ಅಡಚಣಿ ಏನ ರಾಯರ, ಮುಗಿಯೋ ಹಾಂಗ ಕಾಣೂದಿಲ್ಲ! ಅದೇನಿಲ್ಲ ಶ್ರೀಪತಿರಾಯ, ಇವತ್ತ ಏನ ಮಾಡಿ ಬಾಡಿಗಿ ಕೊಡಬೇಕು. ಇಲ್ಲಾ ನಿಮ್ಮ ಸಾಮಾನ ತಗೊಂಡು ಹೊರಗ ಹೋಗ ಬೇಕು. ಸುಮ್ಮನ ನಮ್ಮ ಮನಿ ನಮಗ ಬಿಟ್ಟುಬಿಡಿರಿ.

**ಶ್ರೀಪತಿ:**—ನಾಯಕರ, ಸ್ವಲ್ಪ ತಡೆಯಿರಿ. ಹಾಂಗ ಒಮ್ಮೆಲೆ ಸಿಟ್ಟಾಗ ಬೇಡಿರಿ. ಎಲ್ಲಾರ ಮರ್ಯಾದೇನೂ ಒಂದ ನಿಮ್ಮ ಉಪಕಾರ ಬಹಳ ಆಗೇದ. ಇದೊಂದು ಸಾರೆ ನನ್ನ ಮಾತು ನಡಸರಿ.

**ವೆಂಕಣ್ಣ:**—ಅದೇನು ಕೇಳೋ ಹಾಂಗಿಲ್ಲ. ಹೊರಗ ಆಳು ಸಹ ಕೂಡಿಸಿ ಬಂದೀನಿ. ಬಾಡಿಗಿ ಕೊಡಬೇಕು, ಇಲ್ಲದಿದ್ದರೆ ಮನಿ ಖಾಲೀ ಮಾಡಬೇಕು.

**ಶ್ರೀಪತಿ:**—ನಾಯಕರ, ಸ್ವಲ್ಪ ಶಾಂತರೀತಿಯಿಂದ ಕೇಳರಿ. ಈಗ ನಾನೊಂದು ಕವನ ಕಟ್ಟಹತ್ತಿದ್ದೇನೆ. ಅದರಿಂದ ನನಗೆ ಎರಡು ನೂರು ರೂಪಾಯಿ ಸಿಗತಾವ ನಿಮ್ಮ ಬಾಡಿಗಿ ಎಲ್ಲಾ ಚುಕ್ತಾ ಮಾಡತೀನಿ. ಈಗ ದಯಮಾಡಿ ಹೋಗರಿ.

**ವೆಂಕಣ್ಣ:**—ನಿಮ್ಮ ಕವಿತಾ ಅಂದರೇನು ಬಂಗಾರ ಇದ್ದಾಂಗೇನು? ಅದೆಲ್ಲ ನಮಗ ಹೇಳಬ್ಯಾಡ್ರಿ..ಅವೂಟ ಇಲ್ಲಾ ಅಂದ್ರ ಹ್ಯಾಂಗರೀ? ಸ್ವಲ್ಪ ಇಲ್ಲ ಸ್ವಲ್ಪು ಕೊಡಬೇಕು. ಅಷ್ಟೂ ಆಗದಿದ್ದರ ಮನೀ ಬಿಟ್ಟುಬಿಡ್ರಿ.

**ಶ್ರೀಪತಿ:**—ಸ್ವಲ್ಪ ತಡೀರಿ ನಾಯಕರ, ವಿಚಾರಿಸುತ್ತೇನೆ. (ಶಾರದೆಯ ಹತ್ತಿರ ಹೋಗಿ ಕಿವಿಮಾತಿನಲ್ಲಿ) ಶಾರದಾ, ಈ ಪೀಡಾ ದೂರಾಗುವದಿಲ್ಲ. ಏನಾದರೂ ಸ್ವಲ್ಪ ನಿನ್ನ ಹತ್ತಿರ ಸ್ವಲ್ಪ ಇದ್ದರ........

**ಶಾರದೆ:**—(ಸಿಟ್ಟಿನಿಂದ) ಹುಂ, ಹುಂ. ಅದ, ಕೊಡಲೇನು?

**ಶ್ರೀಪತಿ.**—(ತಿಳಿಯದೆ) ಏನು? ಕೊಡು ಕೋಡು, ಬೇಗನೆ ಕೊಡು

**ಶಾರದೆ:**—ತಗೊಳ್ರಿ, ಇದೊಂದ ಉಳದದ, ಅದನ್ನೂ ಕೊಟ್ಟಬಿಡ್ರಿ. ಮಂಗಳಸೂತ್ರಕ್ಕೆ ಕೈಹಚ್ಚುವಳು)

**ಶ್ರೀಪತಿ.**—ಏ! ಏ! ಏನು ಏನು! ಬೇಡ, ಬೇಡ. ನಾನೆಲ್ಲ ಸಮಾಧಾನ ಮಾಡುತ್ತೇನೆ.

**ಶಾರದೆ:**—ಅಯ್ಯ, ಹಂಗಾರ, ನೀವು ಕವಿತಾ ಬರೀಲಿಲ್ಲ, ನಾನು ಜಪೀಹಾರ ಕಾಣಲಿಲ್ಲ. ಆಗಳೆ ಪೋಸ್ಟಿನ ಹೊತ್ತು ಮೀರಿ ಹೋಗಿಬಿಟ್ಟಿತು, ಇನ್ನೇನು!

**ಶ್ರೀಪತಿ:**—(ನಿರುತ್ಸಾಹದಿಂದ) ಅದಕ್ಕೇ ಶಾರದಾ, ನಾನು ಹೇಳುವದು. ಹೊಟ್ಟೆ ತಂಪಾಗಿದ್ದರೆ ಬುದ್ಧಿ ಚುರುಕಾಗಿರುವದು ಇಂಥಾ ರಂಭಾಟದಾಗ ಕವಿತಾ ಬರಿ ಅಂದರ ಹ್ಯಾಂಗ ಸಾಧ್ಯ ಆದೀತು!

**ಶಾರದೆ:**—ಇದನ್ನೇನು ನೀವು ನನಗ ಕಲಿಸಬೇಕಾಗಿಲ್ಲ. ಅಯ್ಯ, ನನ್ನ ಹಣೇಬರ ಏನದನೋ ಅದು ಆಗ್ತದ. ಇನ್ನೆಲ್ಲಿಯ ಆಶೆ!

**ಶ್ರೀಪತಿ:**—ಈ ಬ್ರಹ್ಮರಾಕ್ಷಸ ಬೆನ್ನುಹತ್ತಿದಾಗ ನಿರಾಶೆಯೋ....

**ವೆಂಕಣ್ಣ:**—ಏನ ರಾಯರ ಏನು? ನಾವು ಕೇಳಿದ್ದು ನಿರಾಶಾ ಅನ್ರಿ ಹಂಗಾರ!

**ಶ್ರೀಪತಿ:**—ನಮಗ ನಿರಾಶೆಯಾದ ಮೇಲೆ ನಿಮಗೂ ಆದೇ. ಈ ಆಶೆಯು ಬಿಸಿಲ್ಗುದುರೆ ಹತ್ತಲಿಕ್ಕೆ ಹೋದರ ಹಲ್ಲು ಮುರಕೊಂಬೋದು ತಪ್ಪಿದ್ದಲ್ಲ. ಶಾರದಾ, ಇನ್ನೇನಿದೆ ನಡೆ. ಇಷ್ಟೊತ್ತಿನ ವರೆಗೆ ಕಟ್ಟಿದ್ದೆಲ್ಲ ಗಾಳಿಯ ಗೋಪುರ!

(ತೆರೆ ಬೀಳುವುದು)



'ಸೌಭಾಗ್ಯ'ದಲ್ಲಿ ಪಾತ್ರವಹಿಸಿದ ಬೆಂಗಳೂರಿನ 'ಯುನೈಟೆಡ್ ಆರ್ಟಿಸ್ಟ್ಸ್'

# ಸೌಭಾಗ್ಯ

"ಲಾಟರಿಯಲ್ಲಿ ಒಂದು ಲಕ್ಷ ರೂಪಾಯಿ
ಗೆದ್ದು ಉನ್ಮತ್ತನಾದ ಭಾಗ್ಯವಂತನ
ಒಂದು ದಿನಚರ್ಯೆ"

೧-೫-೧೯೪೨

ವಿಷಯ ಕೊಟ್ಟದ್ದು . . ಸಂಜೆ ಐದು ಗಂಟೆಗೆ
ಅಭಿನಯ ಪ್ರಾರಂಭ . . ರಾತ್ರಿ ೯-೪೫ ಗಂಟೆಗೆ
ಅಭಿನಯಿಸಿದ ವೇಳೆ . . ೩೫ ನಿಮಿಷ ಮಾತ್ರ.

## ಪಾತ್ರಗಳು



ಸುಬ್ಬುನರಸಿಂಹಯ್ಯ . . . . . ಒಬ್ಬ ಬಡ ಗೃಹಸ್ಥ

ಸುಬ್ಬುಲಕ್ಷ್ಮಮ್ಮ . . . . . . ಗೃಹಸ್ಥನ ಹೆಂಡತಿ

ಸುಬ್ಬುಕೃಷ್ಣಯ್ಯ . . ಈ ದಂಪತಿಗಳ ಏಕಮಾತ್ರ ಪುತ್ರ

ಸಂಗರಾಮಯ್ಯ . . ಈ ಕುಟುಂಬ ವಾಸಿಸುತ್ತಿರುವ ಮನೆಯ ಮಾಲಕ

ಅಭಿನಯಿಸಿದವರು:

ಬೆಂಗಳೂರಿನ "ಯುನೈಟೆಡ್ ಆರ್ಟಿಸ್ಟ್ಸ"

## ಪಾತ್ರವಹಿಸಿದವರು



ಸುಬ್ಬುನರಸಿಂಹಯ್ಯ . . ಶ್ರೀ. ಸಿ. ಕೆ. ನಾಗರಾಜರಾವ್

ಸುಬ್ಬುಲಕ್ಷ್ಮಮ್ಮ . . ಶ್ರೀ. ವಾಸುದೇವರಾವ್ ಗಿರಿಮಾಜಿ

ಸುಬ್ಬುಕೃಷ್ಣಯ್ಯ. ಶ್ರೀ. ಸಿ. ಕೆ. ಶಂಕರನಾರಾಯಣರಾವ್

ಸಂಗರಾಮಯ್ಯ . . . . . . . . ಚಿ. ಸದಾಶಿವಯ್ಯ

## ಪ್ರವೇಶ

[ಸುಬ್ಬನರಸಿಂಹಯ್ಯನ ಮನೆಯ ಪಡಸಾಲೆ. ಎದುರುಗಡೆಯ ಗೋಡೆಯಲ್ಲಿರುವ ಗೂಡಿನಲ್ಲಿ ಹಳೆಯದಾಗಿ ಮಂಕು ಹಿಡಿದ ಒಂದು ಕುಂಟು ಗಡಿಯಾರ ಗೂಡಿನ ಎಡ ಭಾಗದಲ್ಲಿ ಗೋಡೆಗೆ ತಗಲುಹಾಕಿರುವ ಒಂದು ಎಣ್ಣೆಯ ಲ್ಯಾಂಪು ಬಲಭಾಗದಲ್ಲಿ ಗೋಡೆಗಂಟಿಸಿರುವ ಒಂದು ಸರಸ್ವತಿಯ ಪಟ. ಈ ಗೂಡಿನ ಕೆಳಗೆ ಗೋಡೆಯನ್ನೊರಗಿ ಹದಿನೇಳು ವರುಷದ ಸುಬ್ಬುಕೃಷ್ಣನು ಇಳಿಜಾರು ಮೇಜಿನ ಮುಂದೆ ಕುಳಿತಿರುವನು. ಮೇಜಿನ ಮೇಲೆ ಬಲಪಕ್ಕದಲ್ಲಿ ಹಲವು ಪುಸ್ತಕಗಳು, ಎಡಪಕ್ಕದಲ್ಲಿ ಮಡಿಸಿಟ್ಟಿರುವ ಅಂಗಿಯ ಮೇಲೆ ಒಂದು ಬಿಳಿಯ ಟೋಪಿ. ಸುಬ್ಬುಕೃಷ್ಣನ ಮುಖ ಬಳಲಿರುವುದು.]

**ಸು. ಕೃಷ್ಣ** —(ಮೇಜಿನ ಮೇಲಿನ ಪುಸ್ತಕವನ್ನು ದಿಟ್ಟಿಸುತ್ತಾ)

" Breathes there the man with soul so dead
Who never to himself hath said
(ಹೊಟ್ಟೆಯನ್ನು ಮುಟ್ಟಿಕೊಂಡು ಗದ್ಗದಿತನಾಗುವನು)
This is my own, my native land.. ......"

(ಕತ್ತೆತ್ತಿ ಕಣ್ಣುಗಳನ್ನು ಒರಸಿಕೊಂಡು ಹಿಂದಿರುಗಿ ಗಡಿಯಾರವನ್ನು ನೋಡಿ, ಅಂಗಿ ಟೋಪಿಗಳನ್ನು ಧರಿಸಿ, ಕೆಲವು ಪುಸ್ತಕಗಳನ್ನು ಜೋಡಿಸಿ ಹಿಡಿದು, ಸರಸ್ವತಿಯ ಪಟವನ್ನು ಕಣ್ಣಿಗೊತ್ತಿಕೊಂಡು, ಬಲಗಡೆಯ ಬಾಗಿಲ ಬಳಿಗೆ ಬರುವನು)

ಅಮ್ಮಾ ! ಅಮ್ಮಾ !! ನಾನು ಸ್ಕೂಲಿಗೆ ಹೊರಡುತ್ತೇನಮ್ಮ.

(ಒಳಬಾಗಿಲಿನಿಂದ ಮೂವತ್ತೈದು ವರುಷದ ಸುಬ್ಬುಲಕ್ಷ್ಮಮ್ಮನು ಪ್ರವೇಶಿಸುವಳು. ಸೆರಗು ಹರಿದ ಸೀರೆ. ಹರಳಿಲ್ಲದ ಓಲೆ. ಮಂಕಾದ ಮೂಗುತಿ. ಹಣೆಯಲ್ಲಿ ಬಟ್ಟನೆ ಕುಂಕುಮ)

**ಸು. ಲಕ್ಷ್ಮ**:—ಆಗಲೇ ಹೊತ್ತಾಗಿಬಿಡಿತೇನೋ ಮಗೂ ಸ್ಕೂಲಿಗೆ ?

**ಸು. ಕೃಷ್ಣ**:—ಹೌದಮ್ಮಾ ! ಹತ್ತೂವರೆಯಾಗ್ಲಾಯಿತು ಆಗಲೇ.

**ಸು. ಲಕ್ಷ್ಮ**:—ಅನ್ನ ಆಗಿದೆಯೋ ಮಗೂ; ಚೆಟ್ನಿ ತಿರುವುತ್ತಾ ಇದೀನಿ ಸ್ವಲ್ಪ ಚೆಟ್ನಿ ಅನ್ನಾನಾದರೂ ತಿಂದುಕೊಂಡು ಹೋಗುವಿಯಂತೆ. ಇಲ್ಲದಿದ್ದರೆ ಸಂಜೆ ವರೆಗೂ ಹೇಗಪ್ಪ ಉಪವಾಸವಿರುವುದು ?

**ಸು. ಕೃಷ್ಣ:**—ಪರವಾಯಿಲ್ಲಮ್ಮ; ಹೋಗಿಬಿಟ್ಟು ಎರಡು ಘಂಟೆಗೆ ಮನೆಗೆ ಬರುತೇನೆ.

**ಸು. ಲಕ್ಷ:**—ನಿನಗೋಸ್ಕರ ಭಾಗೀರಥಮ್ಮನವರ ಮನೇಯಿಂದ ಒಂದು ಪಾವು ಅಕ್ಕಿ ತಂದು ಹಾಕಿದಸಲ್ಲೋ ಮಗೂ. ಸ್ವಲ್ಪ ಇರೋ.

**ಸು. ಕೃಷ್ಣ:**—(ಕಣ್ಣುಗಳಲ್ಲಿ ನೀರು ತುಂಬಿ) ಬೇಡಮ್ಮ, ನೋಡೋಣ. ಮುಂಕ್ಕಾಲು ಪಾಲು ಹೋಗುತಾನೇ ಮನೆಗೆ ವಾಪಸ್ಸು ಬರೋಹಾಗಾಗುತ್ತೋ ಏನೋ, ಹೋಗಿ ನೋಡುತೇನೆ.

**ಸು. ಲಕ್ಷ:**—(ಹತ್ತಿರ ಬಂದು ತಲೆಯನ್ನು ನೇವರಿಸುತ್ತಾ) ಇದು ಯಾಕೋ ಮಗೂ ಕಣ್ಣಿನಲ್ಲಿ ನೀರು ?

**ಸು. ಕೃಷ್ಣ**—ಫೀಸ್ ಕೊಡೋದಕ್ಕೆ ಈ ಹೊತ್ತೇ ಕಡೇ ದಿನಾವಮ್ಮಾ ! ಅದೂ ನಾಲಕ್ಕಾಣೆ ಫೈನ್ ಸೇರಿಸಿ. ಈ ಹೊತ್ತು ಕೊಡದಿದ್ದವರನೆಲ್ಲಾ ಹೆಸರು ಹೊಡೆದು ಹಾಕಿ, ಮನೆಗೆ ಕಳುಹಿಸಿಬಿಡುತಾರಮ್ಮ; ಕ್ಲಾಸಿಗೆ ಸೇರಿಸುವುದಿಲ್ಲ. (ಕಣ್ಣೊರಸಿಕೊಳ್ಳುವನು)

**ಸು. ಲಕ್ಷ:**—ಎಂಥಾ ದುಸ್ಥಿತಿ ಬಂದಿತಪ್ಪಾ ನಮಗೇ ! ದೇವರು ಅವರಿಗಾದರೂ ಒಳ್ಳೆಯ ಬುದ್ಧಿ ಕೊಡಲಿಲ್ಲ. ಮುತ್ತಿನ ಮಣಿಯ ಹಾಗೇ ಮನೆಗೊಬ್ಬ ಮಗ. ಅವನನ್ನ ಅಚ್ಚುಕಟ್ಟಾಗಿ ಸಾಕೋದಕ್ಕಿಲ್ಲದ ಹಾಗಾಯಿತು! ಇದ್ದಬಿದ್ದ ಒಂದೆರಡು ಒಡವೆಗಳೂ, ಪುಡಿಗಾಸುಗಳೂ ಅವರ ಲಾಟರೀ ಹುಚ್ಚಿಗೆ ಆಹುತಿಯಾಯಿತು. ಕಡೇದಾಗಿ ಉಳಿದಿದ್ದ ಆ ನೀಲಿ ಪೀತಾಂಬರ......ಹಠ ಮಾಡಿ ಏನೋ ಈ ಸಲ ದುಡ್ಡಿನ ಸುರಿಮಳೆ ಸುರಿಯುತ್ತೇಂತ ನಂಬಿಕೊಂಡು ಅದನ್ನ ತಗೊಂಡು ಹೋಗಿ, ಆ ಮಾರ್ವಾಡೀ ಹತ್ತಿರ ಒತ್ತೆ ಇಟ್ಟು ನನ್ನ ಹೆಸರಿನಲ್ಲೇ ಟಿಕೀಟು ತಗೊಂಡು ಬಿಟ್ಟರು....ಕೆಲಸ ಕಳೆದುಕೊಂಡು ಮನೆಯಲ್ಲಿ ಕೂತು ಎರಡು ವರುಷವಾಯಿತು. ಅಂದಿನಿಂದ ಈ ಭಿಕ್ಷಾಟನದ ಸಂಸಾರವೇ ಆಗಿದೆ. ಆ ಪೀತಾಂಬರವಾದರೂ ಇದ್ದಿದ್ದರೇ ನಿನ್ನ ಕಣ್ಣಿನ ನೀರನಾದರೂ ಒರೆಸಬಹುದಾಗಿತ್ತು. ಮಗೂ! ನಿಮ್ಮ ಮೇಷ್ಟರಿಗಾದರೂ ಹೇಳಿ ನೋಡಪ್ಪ 'ಇನ್ನೊಂದೆರಡುವಾರದಲ್ಲೇ ಫೀಸ್ ಬಾಕಿ ಎಲ್ಲಾ ಕೊಟ್ಟುಬಿಡುತೇವೇ' ಅಂತ.

**ಸು. ಕೃಷ್ಣ:**—ಹಾಗೆ ಆಗೊಲ್ಲ ಅಮ್ಮ. ಈಗ ಬಂದಿರೋ ಹೆಡ್ ಮೇಷ್ಟ್ರು ತುಂಬಾ ಕಟ್ಟುನಿಟ್ಟು. ಫೀಸ್ ಕೊಡೋಕಾಗದಿದ್ದರೆ ಓದೋದನ್ನೇ ಬಿಟ್ಟುಬಿಡೀಂತ ಹೇಳುತಾರೆ.

**ಸು. ಲಕ್ಷ:**—ಬಂದು ಸ್ವಲ್ಪ ಇರೋ. ಅಂಗಿ ಟೋಪಿ ತೆಗೆದುಬಿಟ್ಟು ಬಾರೋ. ಒಂದೆರಡು ತುತ್ತು ಚಟ್ನಿ ಅನ್ನ ಕಲಸಿ ಹಾಕಿಬಿಡುತೇನೆ. ಬರೀ ಹೊಟ್ಟೇಲಿ ಅಷ್ಟು ದೂರ ಓಡುತಾ ಹೋಗಬೇಕಲ್ಲಪ್ಪಾ.

**ಸು. ಕೃಷ್ಣ**—(ಇತ್ತ ತಿರುಗಿ) ಬೇಡಮ್ಮ. ನನಗೆ ಅನ್ನ ಸೇರೊಲ್ಲ. ಸ್ಕೂಲಿಗೆ ಹೋಗಿಬರುತೇನೆ. (ನಿಷ್ಕ್ರಮಣ)

**ಸು. ಲಕ್ಷ**—(ಅತ್ತಕಡೆಯೇ ನೋಡುತ್ತಿದ್ದು ನಿಟ್ಟುಸಿರು ಬಿಟ್ಟು) ಈ ಕಷ್ಟವನ್ನ ಯಾರು ನೋಡಿಯಾರು? ಕರುಳು ಹಿಂಡಿದ ಹಾಗಾಗುತ್ತೆ. ದೇವರಿಗೆ ನಮ್ಮ ಮೇಲೆ ದಯ ಯಾವಾಗ ಬರುತ್ತೋ! (ಕಣ್ಣೊರಸಿಕೊಂಡು ಒಳಕ್ಕೆ ಹೋಗುವಳು)

(ಕ್ಷಣಕಾಲಾನಂತರ ಹೊರಬಾಗಿಲ ಬಳಿ ಧ್ವನಿ—'ಸುಬ್ಬುನರಸಿಂಹಯ್ಯಾ! ಸುಬ್ಬುನರಸಿಂಹಯ್ಯಾ!' ಎಂದು. ಸುಬ್ಬುಲಕ್ಷ್ಮಮ್ಮನು ಮತ್ತೆ ಈಚೆಗೆ ಬರುವಳು)

**ಸು. ಲಕ್ಷ:**—(ಸೊಂಟಕ್ಕೆ ಸಿಕ್ಕಿಸಿದ್ದ ಸೆರಗನ್ನು ಸರಿಪಡಿಸಿಕೊಳ್ಳುತ್ತ) ಯಾರೂ? ಯಾರದೂ?

(ಶಾಲು ಹೊದೆದು, ಕೈಲಿ ದೊಣ್ಣೆ ಹಿಡಿದ ಬಿಳಿಮೀಸೆ ಮುದಿ ಸಂಗರಾಮಯ್ಯನ ಪ್ರವೇಶ)

**ಸಂಗ**—ನಾನಮ್ಮ ತಾಯೀ! ಸಂಗರಾಮಯ್ಯ.......ಸುಬ್ಬು ನರಸಿಂಹಯ್ಯ ಮನೇಲಿ ಇಲ್ಲವೇನೂ?

**ಸು. ಲಕ್ಷ**—ಇಲ್ಲ. ಅವರು ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದು ಹೊರಟು ಹೋದರು.

**ಸಂಗ:**—ಎಲ್ಲಿಗೆ ಹೋಗಿದಾನೆಯೋ?

**ಸು. ಲಕ್ಷ:**—ನಾನು ಹೇಗೆ ಹೇಳಲಿ? ಅವರ ಓಡಾಟಗಳೊಂದೂ ನನಗೆ ತಿಳಿಯದು. ಮನೆಯಲ್ಲಿರೋವಾಗ ಅವರಾತಂಕದ ಮುಖ ನೋಡಿದರೆ ಅವರನ್ನ ಏನು ಕೇಳೋದಕ್ಕೂ ಮನಸ್ಸೇ ಬರೊಲ್ಲ.

**ಸಂಗ.**—ನನಗೆ ಗೊತ್ತು ಎಲ್ಲಿ ಹೋಗಿದಾನೇ ಅಂತ.

ಸು. ಲಕ್ಷ್ಮ—ಎಲ್ಲಿ ಹೋಗಿದಾರೆ?

ಸಂಗ:—ಇನ್ನೆಲ್ಲಿಗೆ ಹೋದಾನು ಹೇಳು! ಬೆಳಗಾಯಿತೂ ಅಂದ್ರೆ, ಆ ಪುಟ್ಟಪ್ಪನ ಹೋಟಲ ಹಿಂದುಗಡೆ ಮಾವಿನಮರದ ಕೆಳಗೆ ಜಮಾ ಇವರೆಲ್ಲಾ. ಇವರ ಅದೃಷ್ಟಪರೀಕ್ಷೆ ಮಾಡೋದಕ್ಕೆ ಆ ಕುಂಟ ಕುಟುಂಬಶಾಸ್ತ್ರಿ ಬೇರೇ. ನಿನ್ನದು ಇಂಥಾ ನಕ್ಷತ್ರ; ಇಂಥಾ ನಂಬರಿಗೆ ದುಡ್ಡು ಹಾಕು. ನಿನಗೆ ಇಷ್ಟು ಬರುತ್ತೆ. ನಿನ್ನದು ಅಂಥಾ ನಕ್ಷತ್ರ; ಅಂಥಾ ಬಣ್ಣದ ಕುದುರೆ ಮೇಲೆ ದುಡ್ಡು ಕಟ್ಟು; ನಿನಗೆ ಅಷ್ಟು ದುಡ್ಡು ಬರುತ್ತೆ ಅಂತ ಹುಚ್ಚು ಹಿಡಿಸಿ ಕುಣಿಸುತಾನೆ ಇವರನೆಲ್ಲಾ. ಈ ಗುಂಪಿಗೆ ಸೇರದಿದ್ದರೆ ಸುಬ್ಬು ನರಸಿಂಹಯ್ಯನೂ ಹೇಗೋ ಇರತಿದ್ದ....ಅಲ್ಲಮ್ಮಾ! ನನಗೆ ಆರು ತಿಂಗಳಿಂದ ಮನೆ ಬಾಡಿಗೆ ಕೊಡುವುದಕ್ಕೆ ದುಡ್ಡಿಲ್ಲ. ಅಂಥಾದ್ದರಲ್ಲಿ, ತಿರುಗಿ ಒಂದು ಡಬ್ಬಲ್ ಟಿಕಟ್ ತಗೊಂಡಿದಾನಂತಲ್ಲಾ ಲಾಟರೀದು, ಅದಕ್ಕೆಲ್ಲಿಂದ ಬಂತು ದುಡ್ಡು?

ಸು. ಲಕ್ಷ್ಮ:—ನಿಮಗೆ ಹೇಗೆ ಗೊತ್ತು ಟಿಕಟ್ ತಗೊಂಡದ್ದು?

ಸಂಗ:—ತಗೊಂಡ ಮೇಲೆ ನನಗೆ ಪತ್ತೆ ಆಯಿತು. ಆ ಹೋಟಲ ಮುಂದೆ ಹಿಡಿದೆ ನಿನ್ನ ಗಂಡನ್ನ. ಬಾಡಿಗೆ ದುಡ್ಡು ಕೇಳಿದ್ದಕ್ಕೆ 'ಇನ್ನೊಂದು ಸ್ವಲ್ಪ ದಿವಸ ಸುಧಾರಿಸಿಬಿಡಿ, ನಿಮ್ಮ ಹಣದ ಒಂದಕ್ಕೆ ಎರಡರಷ್ಟು ಕೊಡುತೇನೆ. ಬೇಕಾದರೆ ಈ ಡಬ್ಬಲ್ ಟಿಕೆಟ್‌ನಲ್ಲೇ ನಿಮಗರ್ಧ—ನನಗರ್ಧ' ಅಂತಂದ. ಅವನ ಹುಚ್ಚನ್ನ ನೋಡಿ ನಾನು ಹಾಗೇ ಹೊರಟುಹೋದೆ; ಹೌದೂ ಆ ಟಿಕೆಟ್‌ಗೆ ದುಡ್ಡೆಲ್ಲಿಂದ ಹೊಂಚಿದ?

ಸು. ಲಕ್ಷ್ಮ—ನಾನು ಏನು ಹೇಳಲೀ ಸಂಗರಾಮಯ್ಯನವರೇ!

ಸಂಗ:—ಅದೇ ಆ ಡಬ್ಬಲ್ ಟಿಕೀಟಿಗೆ ದುಡ್ಡು ಎಲ್ಲಿಂದ ಬಂದಿತೂ ಅನ್ನೋದನ್ನ ಹೇಳು.

ಸು. ಲಕ್ಷ್ಮ—ಆ ದಿನ ಒಂದೂ, ಮನೇಲಿ ಕಣ್ಣೀರು ತುಂಬಿಕೊಂಡು ಕೂತುಕೊಂಡರು. 'ಹೇಗಾದರೂ ಮಾಡಿ ಹತ್ತು ರೂಪಾಯಿ ತಂದು ಕೊಡು; ಈ ಸಲ ತಾರಾಬಲ ಚಂದ್ರಬಲ ಚೆನ್ನಾಗಿದೆ; ಭಾಗ್ಯಲಕ್ಷ್ಮಿ ಮನೇಗೆ ಬಂದೇ ಬರುತಾಳೇ' ಅಂತ. ನನಗೇನೂ ತೋಚಲಿಲ್ಲ. ಕಡೇಗೆ ತುಂಬಾ ಯೋಚನೆ ಮಾಡಿ, ನಮ್ಮ ತಂದೆಯ ಗುರುತಾಗಿ, ನಮ್ಮ ಮದುವೆಯ

ಜ್ಞಾಪಕವಾಗಿ ಉಳಿದಿದ್ದ ನೀಲಿ ಪೀತಾಂಬರಾನ ಈಚೆಗೆ ತೆಗೆದು ತಂದು ಕೊಟ್ಟುಬಿಟ್ಟೆ. ಅವರ ಸಂತೋಷಕ್ಕೆ ಪಾರವೇ ಇಲ್ಲ. ಅದರಿಂದ ನನ್ನ ಹೆಸರಿನಲ್ಲೇ ಟಿಕೆಟ್ ತಗೊಂಡರಂತೆ.

**ಸಂಗ.**—ಅಲ್ಲಾ, ನಿನ್ನ ನೀಲೀ ಪೀತಾಂಬರಕ್ಕೂ ಟಿಕೀಟಿಗೂ ಏನು ಸಂಬಂಧಾವಮ್ಮಾ ?

**ಸು. ಲಕ್ಷ್ಮಿ:**—ಆ ಸೀರೇನ ತಗೊಂಡು ಹೋಗಿ, ಆ ಮಾರವಾಡಿಯ ಹತ್ತಿರ.........

**ಸಂಗ**—ಅಯ್ಯೋ ! ಅಯ್ಯೋ !! ಎಲ್ಲಿಯ ವರೆಗೆ ಹತ್ತಿಬಿಡಿತು ಇವನ ಹುಚ್ಚು !......ನೋಡು ಸುಬ್ಬುಲಕ್ಷ್ಮಮ್ಮ ! ನಿಮ್ಮ ಹುಚ್ಚಿಗೆ ನೀವು ಹೇಗಾದರೂ ದುಡ್ಡು ಹೊಂಚಿಕೊಳ್ತೀರ; ಆದರೆ ನನ್ನ ಕಷ್ಟದ ಕೂಗು ನಿಮ್ಮ ಕಿವೀಗೆ ಕೇಳೊಲ್ಲ..ನ್ಯಾಯವೇ ! ನರಿಯ ಕೂಗು ಗಿರಿ ಮುಟ್ಟೀತೇ ಅಂತ ಅಲ್ಲವಮ್ಮಾ ! ನಾಳೆ ಫಸ್ಟಿಗೆ ಏಳು ತಿಂಗಳು ಆಯಿತು ನಿಮ್ಮಿಂದ ಬಾಡಿಗೆ ಬಂದು. ನನಗೂ ನಿಮ್ಮ ಮನೆ ಬಾಗಿಲಿಗೆ ಅಲದೂ ಅಲದೂ ಎರಡು ಜೊತೆ ಎಕ್ಕಡ ಸವೆದುಹೋಯಿತೇ ಹೊರತೂ, ಒಂದು ಬಿಡಿಕಾಸಾದರೂ ಕೈಗೆ ಬರಲಿಲ್ಲ. ನಾನಾದರೂ ಸಾವ್ಕಾರನೇ ?—ನಿಮ್ಮನ್ನ ಪೀಡಿಸದೆ ತೆಪ್ಪಗೆ ಇದ್ದುಬಿಡೋಣ, ನಿಮ್ಮ ಲಾಟರೀ ಲಕ್ಷ್ಮಿ ಪ್ರತ್ಯಕ್ಷವಾಗುವ ವರೆಗೂ ಅಂದ್ರೇ ?....ನನ್ನ ಜೀವನ ನಡೆಸುವುದಕ್ಕೆ ಇರೋ ಆಧಾರ ನನ್ನ ಮೂರು ಮನೆಗಳ ಬಾಡಿಗೆ. ಅವುಗಳ ಪೈಕಿ ಒಂದರಲ್ಲಿ ನೀವಿದೀರಿ. ನನ್ನ ಪುಣ್ಯವೋ ಏನೋ ನಿಮ್ಮ ಅದೃಷ್ಟಕ್ಕೂ ನನ್ನ ಅದೃಷ್ಟದ ಹಾಗೇ ಗ್ರಹಣ ಹಿಡಿದು ಕೂತಿದೆ. ಅದೆಂದಿಗೆ ಬಿಡುತ್ತೋ, ದೇವರಿಗೇ ಗೊತ್ತು.. !ಆ ಪೇಟೇಲಿರುವ ಮನೇ, ಅದಕ್ಕೆ ಆ ಪುಟ್ಟಪ್ಪನೇ ಇನ್ನೊಬ್ಬಾತನ್ನ ಕರೆದುಕೊಂಡು ಬಂದು, ಬಾಡಿಗೆ ಪತ್ರ ಬರೆಸಿ, ಒಂದು ತಿಂಗಳು ಅಡ್ವಾನ್ಸ್ ಕೊಡಿಸಿ, ಹೋಟಲು ಇಡಿಸಿದ. ಆ ಧಾಂ ಧೂಂ ನೋಡಿ ನನ್ನ ಅದೃಷ್ಟ ಖುಲಾಯಿಸಿತೂಂತ ಅಂದುಕೊಂಡೆ. ಆದರೆ ಆ ಪುಣ್ಯಾತ್ಮ ಇದ್ದ ಎಂಟು ತಿಂಗಳಲ್ಲಿ ಒಂದು ತಿಂಗಳ ಬಾಡಿಗೇನೂ ಸಹಾ ಕೈಯೆತ್ತಿ ಕೊಡಲಿಲ್ಲ. 'ನನ್ನ ಹೋಟಲಿನಲ್ಲಿರುವ ಮೇಜುಗಳನ್ನು ನೋಡೀ; ಗೋಡೇಗೆ ತೂಗುಹಾಕಿರುವ ಭಾರಿಭಾರಿ ಕನ್ನಡಿಗಳನ್ನ ನೋಡೀ; ತಿಂಡಿಗಳಿಟ್ಟಿರುವ [illegible]

ನೋಡೀ; ನಿಮ್ಮ ಬಾಡಿಗೆಗೆ ಏನು ಭಯ ಸಂಗರಾಮಯ್ಯನವರೇ!' ಅಂತಾನೇ ಇದ್ದ. ಕಡೇಗೆ ದೀಪಾವಳಿ ಹಿಂದಿನ ದಿವಸ ರಾತ್ರಿ ಹೋಟಲು ಮುಚ್ಚಿ ಮಲಗಿದ್ದ. ಬೆಳಿಗ್ಗೆ ಎದ್ದು ಹೋಗಿ ನೋಡಿದರೇ, ಹೋಟಲ್ ತೆಗೆದಿಲ್ಲ; ಬೀಗ ಹಾಕಿದೆ. ಸಂಜೆಗೆ ಬೀಗ ಒಡೆಯಿಸಿ ನೋಡಿದರೇ—ಹಾಲಿನಲ್ಲಿ ಒಂದು ತಟ್ಟೆ ಬೂಂದೀ ಕಾಳು ಚೆಲ್ಲಿದೆ; ಉಗ್ರಾಣದಲ್ಲಿ ನಾಲ್ಕು ಮೈದಾ ಹಿಟ್ಟಿನ ಖಾಲೀ ಚೀಲಗಳು, ಒಂದು ಕಡಲೇ ಹಿಟ್ಟಿನ ಖಾಲಿ ಡಬ್ಬ ಬಿದ್ದಿವೆ; ಅಡುಗೆಯ ಮನೆಗೆ ಹೋಗಿ ಇಣುಕಿದರೇ ಒಲೇ ಬಳಿ ಮುತ್ತುಗದೆಲೆಯ ಮೇಲೆ ಒಂದು ಮುದ್ದೆ ಹಳೆಯ ಚಟ್ನಿ ನಾರುತಾ ಇದೆ. ಆಯಿತಲ್ಲಮ್ಮಾ ಅಲ್ಲಿ ನನ್ನ ಉದ್ಧಾರವಾದದ್ದು! ಆ ಹೊತ್ತಿನಿಂದ ಆ ಮನೆ ಖಾಲಿಯಾಗೇ ಇದೆ. ಬರೋವರೆಲ್ಲಾ ಹೋಟಲಿಗೇಂತಾನೇ ಕೇಳುತಾರೆ; ನನಗೆ ರೇಗಿ ಬೀಳೋ ಹಾಗೆ ಆಗುತ್ತೆ. ಇನ್ನು ಆ ಕೋಟೆಯ ಮನೇ—ಅಲ್ಲಿಗೆ ಯಾವನೋ ಸೂಟ್-ಗೀಟ್ ಹಾಕಿಕೊಂಡು ಮೂರು ಜನ ಹೆಂಗಸರನ್ನ ಕರೆದುಕೊಂಡು ಬಂದು, 'ಇವರು ನನ್ನ ತಂಗಿಯರು; ನಾನು ತಮಗೆ ತಿಂಗಳು ತಿಂಗಳಿಗೆ ತಪ್ಪದೆ ಬಾಡಿಗೆಯನ್ನು ತಲುಪಿಸುತೇನೆ' ಅಂತ ಹೇಳೀ, ತನ್ನ ತಂಗಿಯರನ್ನ ಆ ಮನೇಲಿ ತಂಗಿಸಿಬಿಟ್ಟು ಹೋದ ಆ ನನ್ನ ತಮ್ಮ ಇನ್ನೂ ಬರುತಾ ಇದ್ದಾನೆ ತವರುಮನೇಯಿಂದ. ಈ ಹೆಂಗಸರ ಮಾತಿನಂತೆ ನಾನೂ ನಾಲ್ಕು ತಿಂಗಳು ಎದುರು ನೋಡದೇ. ಕಡೆಗೆ ಹೊಟ್ಟೆಯ ಸಂಕಟ ತಡೀಲಾರದೆ, ಹೋಗಿ ಸ್ವಲ್ಪ ರೇಗಿದೆ. ಅದಕ್ಕೇನು ಪ್ರತಿಫಲ ಆಯಿತೂಂತಿಯಾ?...... ಮಾರನೆಯ ದಿನ ಹೋಗಿ ನೋಡಿದರೇ ಮನೆಯ ಬಾಗಿಲು ಹಾರುಹೊಡೆದಿದೆ. ತಂಗಿಯರೂ ಇಲ್ಲ–ಮಂಗಳಗೌರಿಯರೂ ಇಲ್ಲ. ಅಲ್ಲಾ ಸುಬ್ಬುಲಕ್ಷ್ಮಮ್ಮಾ! ನೀನು ಕಷ್ಟದಲ್ಲಿರೋಳು; ನನ್ನ ಕಷ್ಟವನ್ನ ನಿನ್ನ ಹತ್ತಿರ ಹೇಳಿಕೊಂಡರೆ ನಿನಗೆ ಅರ್ಥವಾದರೂ ಆಗುತ್ತೆ. ನೋಡೂ ಮನೇಲಿ ಹದಿನೈದು ಮಕ್ಕಳೋ! ಈಗ ದೊಡ್ಡ ಹೆಣ್ಣುಮಕ್ಕಳಿಬ್ಬರೂ ಬಾಣಂತನಕ್ಕೆ ಬಂದಿದಾರೆ. ಹೈಸ್ಕೂಲು ಕಾಲೇಜಿನಲ್ಲಿ ಓದೋ ಹುಡುಗರು ಐದು ಜನ. ಬಿ. ಎ. ಪ್ಯಾಸ್ ಮಾಡಿ ಕೆಲಸವಿಲ್ಲದೇ ಮನೇಲಿ ಕೂತಿರೋರು ಇಬ್ಬರು.. ನನ್ನ ಮೂರನೇ ಹುಡುಗಿ ಪುಟ್ಟೆಂಕನಿಗೆ ಮೂರು ಸಲ ಗಂಡು ಗೊತ್ತುಮಾಡಿದ್ದಾಯಿತು. ಗಂಡು ಗೊತ್ತಾದಾಗ ದುಡ್ಡು ಸಿಗೊಲ್ಲ; ದುಡ್ಡು ಕೂಡಿಸುವ ವೇಳೆಗೆ ಗಂಡು

ಪರಾರಿ. ನನ್ನ ಈ ಕಷ್ಟಕ್ಕೆ ಯಾರಮ್ಮ ದಿಕ್ಕೂ?....ನೀನು ಮನಸ್ಸಿಗೆ ವ್ಯಥೆಪಟ್ಟುಕೊಳ್ಳಬೇಡ ಹೀಗೆ ಹೇಳುತೇನೇಂತ—ನೀವು ಈ ಏಳು ತಿಂಗಳ ಬಾಡಿಗೆ ಕೊಡದಿದ್ದರೂ ಚಿಂತೆ ಇಲ್ಲ; ದಯಮಾಡಿ ನಾಳೆ ಹತ್ತನೇ ತಾರೀಖಿನ ಒಳಗೆ ಮನೆ ಖಾಲಿ ಮಾಡಿಬಿಡಿ.

**ಸು. ಲಕ್ಷ**—(ಅಂಗಲಾಚಿ) ಸಂಗರಾಮಯ್ಯನವರೇ ! ನೀವೇ ನನ್ನ ತಂದೆ ನೀವು ಇಷ್ಟು ನಿಷ್ಠುರವಾದರೆ ನಾವು ಹೇಗೆ ಬದುಕುವುದು? ಏನೋ ಉಪವಾಸವಿದ್ದರೂ ನಿಮ್ಮ ನೆರಳಿನಲ್ಲಿ ತಂಪಾಗಿದೇವೆ. ನೀವು ಅಟ್ಟಿಬಿಟ್ಟರೇ ನಾವಿನ್ನೆಲ್ಲಿ ಹೋಗಿ ಬದುಕೇವಿ ಈ ಅವಸ್ಥೇಲಿ?

**ಸಂಗ**—ಊರಿನ ಕಷ್ಟವನ್ನೆಲ್ಲಾ ಹಂಚಿಕೊಂಡು ನಾನು ಹೇಗೆ ಸಾಕಿಕೊಳ್ಳಿ ಸುಬ್ಬುಲಕ್ಷ್ಮಮ್ಮ. ನಿನ್ನ ಗಂಡ ಮನೆಗೆ ಬಂದಮೇಲೆ ಅವನಿಗೆ ಈ ಮಾತನ ತಿಳಿಸಿಬಿಡು. ನೀವು ಮನೇನಾದರೂ ಖಾಲಿ ಮಾಡಿದರೆ ನನಗೆ ಉಪಕಾರವಾಗುತ್ತೆ. ಬಂದಿರೋ ಗಿರಾಕಿಗೆ ಇದನ್ನ ಮಾರಿಬಿಟ್ಟಾದರೂ ನನ್ನ ಕಷ್ಟ ಕಡಿಮೆ ಮಾಡಿಕೊಳ್ಳುತ್ತೇನೆ

**ಸು. ಲಕ್ಷ**:—ನೀವು ಹಾಗನ್ನಬೇಡಿ ಸಂಗರಾಮಯ್ಯನವರೇ ! ಸ್ವಲ್ಪ ನಿಧಾನಿಸಿ. ದೇವರು ಕಣ್ಣುಬಿಟ್ಟು ನೋಡಿದರೆ ನಿಮ್ಮ ಬಾಡಿಗೇನ ನಾವು ನಿಲ್ಲಿಸಿಕೊಳ್ಳುವುದಿಲ್ಲ. ನಿರ್ವಂಚನೆಯಾಗಿ ಕೊಟ್ಟುಬಿಡುತೇವೆ (ಕಣ್ಣೊರಸಿ ಕೊಳ್ಳುವಳು)

**ಸಂಗ**:—(ಕತ್ತೆತ್ತಿ ನೋಡಿ, ನೊಂದು, ಸಮಾಧಾನ ಮಾಡುವ ಧ್ವನಿಯಲ್ಲಿ) ಇಲ್ಲಿ ನೋಡು ಸುಬ್ಬುಲಕ್ಷ್ಮಮ್ಮ, ನೀನು ಅಷ್ಟು ವ್ಯಥೆಪಟ್ಟುಗೋಬೇಡ. ಹೋಗಲಿ ಬಿಡು.... ಇನ್ನೂ ಒಂದು ತಿಂಗಳು ದಾರಿ ನೋಡಿಬಿಡುತೇನೆ. ದೇವರು ಮಾಡಿಸಿದ ಹಾಗಾಗಲೀ......ನೋಡಮ್ಮಾ ತಾಯಿ ! ಒಂದು ವೇಳೆ ಒರೋ ಫಸ್ಟು ಒಳಗೂನೂನೆ ನಿನ್ನ ಗಂಡ ನನ್ನ ದುಡ್ಡಿಗೆ ಏನೂ ತರದೂದು ಮಾಡದೇ ಹೋದರೆ, ನಾನು ಆಮೇಲೆ......

**ಸು. ಲಕ್ಷ**:—ಅಷ್ಟು ಮಾಡಿದರೆ ಸಾಕು ಸಂಗರಾಮಯ್ಯನವರೇ! ಇನ್ನು ಒಂದು ತಿಂಗಳ ತಪಸ್ಸಿನಿಂದಲೂ ದೇವರು ಕಣ್ಣುಬಿಟ್ಟು ನೋಡದೇ ಹೋದರೆ, ನಾವು ನಿಜವಾಗಿಯೂ ನಿರ್ಭಾಗ್ಯರು—ನಿಮ್ಮ ನೆರಳಿನಲ್ಲಿ ನೆಲೆಯಾಗಿ ನಿಲ್ಲೋದಕ್ಕೆ ಅಯೋಗ್ಯರೂಂತ ಸ್ಪಷ್ಟವಾದ ಹಾಗೆಯೇ ಆಯಿತು.

**ಸಂಗ**—ನೀನು ಅಡುಗೆ ಕೆಲಸದಲ್ಲಿ ಇದ್ದೆಯೋ ಏನೋ ಪಾಪ! ತೊಂದರೆ ಮಾಡಿದ ಹಾಗಾಯಿತು.

**ಸು. ಲಕ್ಷ**:—ಅಡುಗೆ ಕೆಲಸ ಏನು ಮಹಾ! ಅನ್ನ ಆಗಿತ್ತು; ಚಟ್ನಿ ತಿರುವುತಾ ಇದ್ದೆ.

**ಸಂಗ**—ನೀನು ಏನೂ ತಿಳದುಕೊಳ್ಳದಿರೋ ಪಕ್ಷಕ್ಕೆ ಒಂದು ಮಾತು ಹೇಳಲೇ ಅಂತ....

**ಸು. ಲಕ್ಷ**—ಹೇಳಿ ಸಂಗರಾಮಯ್ಯನವರೇ! ನೀವು ನನ್ನ ತಂದೆ ಇದ್ದ ಹಾಗೆ; ಸಂಕೋಚವೇಕೆ!

**ಸಂಗ**—ಏನೂ ಇಲ್ಲ....ಮನೇಲಿ ಅಕ್ಕಿ ಇರಲಿಲ್ಲ. ಆ ಸುಬ್ಬರಾಯ ಸೆಟ್ಟೀ ಹತ್ತಿರ ಹೋಗಿದ್ದೆ. ಅವನು ಊರಿಗೆ ಹೊರಟು ಹೋಗಿದ್ದ. ಅವನ ಮಗ ಅಂಗಡಿ ಮೇಲೆ ಕುಳಿತಿದ್ದ. ಅಪ್ಪನನ್ನ ಕೇಳದೇ ಸಾಲ ಕೊಡುವುದಕ್ಕೆ ಆಗೋದಿಲ್ಲಾಂತ ಅಂದುಬಿಟ್ಟ....ನಿನಗೆ ತೊಂದರೆಯಾಗದಿರುವ ಪಕ್ಷಕ್ಕೆ, ಒಂದು ಹದಿನೆಂಟು ಪಾವು ಅಕ್ಕಿ ಕೊಟ್ಟಿದ್ದರೇ......ಆಮೇಲೆ ವಜಾ ಹಾಕಿಕೊಳ್ಳಬಹುದಾಗಿತ್ತು.......

**ಸು. ಲಕ್ಷ**—(ಗದ್ಗದಿತಳಾಗಿ)......ಅಯ್ಯೋ! ನನ್ನ ದೌರ್ಭಾಗ್ಯಕ್ಕೆ ಮಿತಿಯೇ ಇಲ್ಲದ ಹಾಗಿದೆ....ಏನು ಹೇಳಲಿ!!

**ಸಂಗ**.—ಯಾಕೆ ತಾಯೀ?

**ಸು. ಲಕ್ಷ**:—ಬೆಳಿಗ್ಗೆ ಆ ಹುಡುಗ ಸುಬ್ಬುಕೃಷ್ಣ ಉಪವಾಸ ಸ್ಕೂಲಿಗೆ ಹೋಗುತ್ತಲ್ಲಾಂತ ನಮ್ಮ ಮುಗ್ಗಲು ಮನೆ ಭಾಗೀರ್ಥಮ್ಮನವರಿಂದ ಒಂದು ಪಾವು ಅಕ್ಕಿ ಇಸುಕೊಂಡು ಬಂದು ಅನ್ನ ಮಾಡಿದೆ. ಸಾರಿಗೆ ಬೇಳೆ ಇಲ್ಲದೆ ಚಟ್ನಿ ತಿರುವುತಾ ಇದ್ದೆ. ಅವನು ಹೊತ್ತಾಯಿತೂಂತ ಅದನ್ನೂ ತಿನ್ನದೆ ಹೊರಟುಹೋದ.

**ಸಂಗ**—(ಹೊರಡಲನುವಾಗಿ) ಹೋಗಲಿ ಬಿಡೂ ತಾಯೀ! ನೀನು ಮನಸ್ಸಿಗೇನೂ ವ್ಯಥೆಪಟ್ಟುಕೊಳ್ಳಬೇಡ. ನೀನು ಭಾಗ್ಯಲಕ್ಷ್ಮಿ. ನಿನ್ನ ಭಾಗ್ಯವನ್ನ ಬೈದುಕೊಳ್ಳಬೇಡ ಇದೆಲ್ಲಾ—ನೀವು ಹುಟ್ಟುದರಿದ್ರನಾದ ನನ್ನ ಮನೆಗೆ ಬಾಡಿಗೆ ಬಂದರಲ್ಲಾ ಇದರ ಪ್ರಭಾವ...ನಾನು ಬರುತೇನಮ್ಮ!

ಸುಬ್ಬುನರಸಿಂಹಯ್ಯ ಬಂದರೇ, ನಾನು ಬಂದಿದ್ದೇಂತ ಹೇಳಿಬಿಡು. ಆ ಗುಪ್ತನಂಗಡೀ ಕಡೆಗೆ ಹೋಗಿಬಿಟ್ಟು ಹಾಗೆ ತಿರುಗಿಕೊಂಡು ಬರುತೇನೆ..

**ಸು. ಲಕ್ಷ**—ಬಂದೇ ಸಂಗರಾವುಯ್ಯನವರೇ! ಒಂದು ನಿಮಿಷ ಕುಳಿತುಕೊಳ್ಳಿ. ಬಂದೇ.

**ಸಂಗ:**—ಯಾಕೆ ತಾಯೀ?

**ಸು. ಲಕ್ಷ**—(ಒಳಕ್ಕೆ ಹೋಗುತಾ) ಒಂದು ಲೋಟ ಪಾನಕ ತಂದು ಕೊಡುತೇನೆ, ಬಿಸಲಲ್ಲಿ ನಡೆದು ಬಂದಿದೀರಿ. (ನಿಷ್ಕ್ರಮಣ)

**ಸಂಗ:**—ಅಯ್ಯೋ! ನನಗೆ ಯಾಕಮ್ಮಾ ಪಾನಕ! ನಿನ್ನ ಮಗನಿಗಾದರೂ ಕೊಟ್ಟು ಕಳುಹಿಸೋದಕ್ಕಿಲ್ಲವೇ! (ಇಜಾರು ಮೇಜಿನ ಮೇಲೆ ಕೂಡುವನು)

**ಸು. ಲಕ್ಷ**—(ಪಾನಕದ ಲೋಟ ತಂದು) ಅವನು ಹೊರಟು ಹೋದ ಮೇಲೆ ದೇವರ ನೈವೇದ್ಯಕ್ಕೋಸ್ಕರ ಕೊಂಚ ಮಾಡಿದ್ದೆ; ತಗೊಳ್ಳಿ!

**ಸಂಗ**—ಅಲ್ಲಾ ತಾಯೀ! ನೈವೇದ್ಯ ಮಾಡಿ ನೀನೂ, ಅವನೂ....

**ಸು. ಲಕ್ಷ**—ನೀವೇ ಪ್ರತ್ಯಕ್ಷ ನಮ್ಮ ಮನೆ ದೇವರು. ನಿಮಗಿಂತ ದೊಡ್ಡ ದೇವರು ಯಾರೂ ಸಂಗರಾವುಯ್ಯನವರೇ?

**ಸಂಗ:**—(ಹಸನ್ಮುಖಿಯಾಗಿ ಕುಡಿಯುತ್ತಾ) ಅಂತೂ ನನ್ನಮ್ಮಾ! ನಿನ್ನ ಮಾತು ಕೇಳುತಾ ಇದ್ದರೆ ನಾನೆಂಥ ಪಾಪೀ ಅಂತ ಅನ್ನಿಸುತ್ತೆ.

**ಸು. ಲಕ್ಷ**—ಅಯ್ಯೋ! ಉಂಟೇ?

**ಸಂಗ**—ಹೌದು ತಾಯೀ! ಇಂಥ ನಿನ್ನ ಒಂದು ಬಾಕಿ ಕೇಳಿ ಮನಸ್ಸನ್ನು ನೋಯಿಸುತ್ತೇನಲ್ಲಾ ಅಂತ (ಕುಡಿಯುತ್ತಾ ಮುಖವನ್ನು ಸಿಂಡ್ರಿಸುವನು)

**ಸು. ಲಕ್ಷ:**—ತುಂಬಾ ಹುಳಿಯಾಯಿತೇನೋ?

**ಸಂಗ**—ಇಲ್ಲಾ; ನಿಂಬೇಹಣ್ಣು ಸ್ವಲ್ಪ ಹೆಚ್ಚಾಗಿ ಹಿಂಡಿದ ಹಾಗಿದೆ.

**ಸು. ಲಕ್ಷ:**—ನಿಂಬೇಹಣ್ಣಲ್ಲ. ಮೊನ್ನೆ ಭಾಗೀರಥಮ್ಮನವರ ಮನೆಯಲ್ಲಿ ಅರಿಸಿನ-ಕುಂಕುಮಕ್ಕೆ ಕರೆದಿದ್ದಾಗ ಅಡಕೆಲೆಯಲ್ಲಿ ಒಂದು ಚೂರು ಬೆಲ್ಲ ಇಟ್ಟುಕೊಟ್ಟಿದ್ದರೂ, ಅವರ ಸ್ವಂತ ಆಲೇದೂ. ಅದು ಮೊದಲೇ ಹುಳಿಗಾಗಿತ್ತೇನೋ! ನಾನು ನೋಡದೇ ಸ್ವಲ್ಪ ಹುಣಿಸೇ ಹುಳಿ ಹಿಂಡಿದೆ. ಅದು ಹುಳಿ......

**ಸಂಗ:**—ಇರಲಿ ಬಿಡು. ಚೆನ್ನಾಗಿದೆ ಇನ್ನು ನಾನು (ಎದ್ದು ಹೊರಡುತ್ತಾ)

ಬರುತೇನವಮ್ಮಾ ತಾಯೀ! ದೇವರು ನಿನ್ನ ಗುಣಕ್ಕೆ ತಕ್ಕಂತೆ ಭಾಗ್ಯ ಕೊಡಬೇಕು, ಅಷ್ಟೇ. (ನಿಧಾನವಾಗಿ ನಿಷ್ಕ್ರಮಿಸುವನು)

**ಸು. ಲಕ್ಷ್ಮಿ:—** (ಅತ್ತ ಕಡೆಯೇ ನೋಡುತ್ತಿದ್ದು, ಖಾಲಿಯಾದ ಲೋಟವನ್ನು ತೆಗೆದುಕೊಂಡು) ಪುಣ್ಯಾತ್ಮಾ! ಇಂಥ ಮನೆಯುವರನ್ನು ನಾನು ಎಲ್ಲೂ ನೋಡಿರಲಿಲ್ಲ. ಅಯ್ಯೋ! ಎಷ್ಟು ದಯಾ! ಎಷ್ಟು ಮಮತೆ! ಇನ್ನೊಬ್ಬರ ಕಷ್ಟಕ್ಕೆ ಎಷ್ಟು ಅನುಕಂಪ!! ಹಿಂದೆ ಇದ್ದ ಮನೆಗಳಲ್ಲ ಅವರ ನಿರ್ದಯಕ್ಕೆ ಹೆದರಿ ಏನಾದರೂ ಮಾಡಿ ಬಾಡಿಗೆ ಮೊದಲು ತೆತ್ತುಬಿಡುತ್ತಿದ್ದೆವು. ಈತನ ಪುಣ್ಯಕ್ಕೆ ಈಗ ಆರೇಳು ತಿಂಗಳಿಂದ....ಈತನ ದಯಾ ಹೆಚ್ಚಿದ ಹಾಗೆಲ್ಲಾ ನಮ್ಮ ಬಡತನವೂ ಹೆಚ್ಚುತಾನೇ ಇದೆ ಮುಖ್ಯವಾಗಿ ಸ್ವಾಮಿ ಕಣ್ಣು ಬಿಟ್ಟು ನೋಡೋ ವರೆಗೆ ನಾವು ಕೂರಗಿದರೇನು ಪ್ರಯೋಜನ...... (ಒಳಕ್ಕೆ ಹೋಗುವಳು)

[ಕ್ಷಣಕಾಲಾನಂತರ ಹೆಗಲ ಮೇಲೆ ಒಂದು ಗಂಟನ್ನು ಹೊತ್ತುಕೊಂಡು ಹಿಡಿಸಲಾರದ ಆನಂದದಿಂದ ಕೈಲೊಂದು ಟೆಲಿಗ್ರಾಂ ಹಿಡಿದು ಸುಬ್ಬುನರಸಿಂಹಯ್ಯನು ಹಾಡುತ್ತಾ ಪ್ರವೇಶಿಸುವನು ಹರಿದ ಅಂಗಿ ಧೋತ್ರ ಧರಿಸಿ ಜರಿಯ ಪೇಟ ಸುತ್ತಿರುವನು ಮುಖದ ಮೇಲೆ ಬೆಳೆದ ಗಡ್ಡ ಮೀಸೆಯಾದರೂ ಸಂತೋಷದಿಂದ ಅರಳಿದೆ ಮುಖಮುದ್ರೆ. ಬಲಗೈ ಬೆರಳಲ್ಲಿ ಹೊಸದಾದ ಮೂರು ವಜ್ರದ ಉಂಗುರುಗಳು. ಅಟ್ಟಹಾಸದ ನಡಿಗೆ]

**ಸು. ನ —** ಭಾಗ್ಯಾದ ಲಕ್ಷ್ಮೀ ಬಾರಮ್ಮ! ನಮ್ಮಮ್ಮ ನೀ ಸೌಭಾಗ್ಯಾದ ಲಕ್ಷ್ಮೀ ಬಾರಮ್ಮಾ......! ಲೇ! ಸುಬ್ಬೂ! ಸುಬ್ಬುಲಕ್ಷ್ಮೀ! ಸುಬ್ಬೀ! ಭಾಗ್ಯಾ! ಸೌಭಾಗ್ಯ!!!

**ಸು. ಲಕ್ಷ್ಮಿ:—** (ಗಾಬರಿಯಿಂದ ಹೊರಗೆ ಬಂದು) ಇದೇನು ಈ ಹೊತ್ತು ಹೀಗೆ ಕಿರಿಚುತಾ ಇದ್ದೀರಿ. ನಿಮ್ಮ ದಮ್ಮಯ್ಯ ಸುಮ್ಮನಾಗಿ! ನಿಮ್ಮ ಹುಡುಗಾಟಿಕೆಯ ಮಾತು ಭಾಗೀರಥಮ್ಮನವರ ಕಿವಿಗೆ ಬಿದ್ದರೆ ಏನು ಗತೀ?

**ಸು. ನ —** (ಬಟ್ಟೆಯ ಗಂಟನ್ನು ಮೇಜಿನ ಮೇಲಿಟ್ಟು) ಗತಿ ಏನೇ? ಅವರೂ ಅವರ ಗಂಡನಿಗೆ ಹೇಳಿ ಹೀಗೆ ಕೂಗಿಸಿಕೊಳ್ಳುತ್ತಾರೆ!

**ಸು. ಲಕ್ಷ್ಮಿ:—** ಇದು ಯಾಕೆ ಹೀಗೆ ಹುಡುಗ ಹುಚ್ಚು! (ತಿರುಗುವಳು)

**ಸು. ನ.—** (ತಲೆಯಲ್ಲಿರುವ ಒಣ ಹೂವನ್ನು ಹಿರಿದು) ಮೊದಲು ಈ ಒಣ ಹೂವನ್ನು ಕಿತ್ತುಹಾಕು. ನಿನ್ನ ತಲೆ ಸರಿಹೋಗಲಿ.

**ಸು. ಲಕ್ಷ್**:—ಅಯ್ಯಯ್ಯೋ! (ಎಸೆಯಲ್ಪಟ್ಟ ಹೂವನ್ನು ಆರಿಸಲು ಹೋಗಿ) ಇದೇನು ಬುದ್ಧಿ ಬಂದಿತು ನಿಮಗೇ! ಮುತ್ತೈದೆಗೆ ಹೂವು ಒಣಗಿದ್ದರೇನು—ಕೇಗಿದ್ದರೇನು!!

**ಸು. ನ**:—(ಅವಳ ಕೈ ತಡದು) ಬಿಡೇ! ಆ ಹೂವನ್ನು ಅಲ್ಲೇ ಬಿಟ್ಟು ಬಿಡೇ!! ನಿನ್ನ ಮುತ್ತೈದೆತನ ನನ್ನಿಂದ ಅಲ್ಲವೇನೇ?

**ಸು. ಲಕ್ಷ್**:—ಅದೆಲ್ಲಾ ಸರೀಂದ್ರೇ. ಆದರೆ ಹೂವನ್ನು ಯಾತಕ್ಕೆ ಎತ್ತಿರೀ?

**ಸು. ನ**:—ನಿನ್ನ ಮುಖಕ್ಕೆ ಈ ಒಣಕಲು ಹೂ ಒಪ್ಪುತ್ತಿಯೇನೇ ಸುಬ್ಬೂ? ಹೋಗಲಿ ಬಿಡೇ; ನಾನು ಮಾರ್ಕೆಟನಲ್ಲಿ ಬೇರೆ ಮಲ್ಲಿಗೆ ಹೂವಿನ ದಂಡೆಗಳಿಗೆ ಆರ್ಡರ್ ಮಾಡಿ ಬಂದಿದ್ದೇನೆಯೇ!

**ಸು ಲಕ್ಷ್**:—(ಆಶ್ಚರ್ಯದಿಂದ) ಇದೇನು ಹೀಗೆ ಮಾತನಾಡುತಾ ಇದ್ದೀ ರಾಂದ್ರೆ!!

**ಸು. ನ**:—ಹೌದೇ! ಇಲ್ಲಿ ಬಾರೆ!! ತಗೊಳ್ಳೇ ಆ ಗಂಟನ್ನ.

**ಸು. ಲಕ್ಷ್**—ಏನಿದೇಂದ್ರೆ ಗಂಟನಲ್ಲಿ?

**ಸು. ನ**:—ತಾರೇ ಇಲ್ಲಿ (ಗಂಟನ್ನು ಬಿಚ್ಚಿ ಸೀರೆ, ಪೀತಾಂಬರ ಧೋತ್ರಗಳನ್ನು ತೆಗೆದು) ತಗೊಳ್ಳೇ! ಈ ಹಳೆಯ ಸಾರಿಸುವ ಗುಡ್ಡೇನ ತೆಗೆದು, ಉಡೇ ಈ ಪೀತಾಂಬರಾನ. ನಿನ್ನ ಕಿವಿಗೆ ಒಂದು ಜೊತೆ ವಜ್ರದ ಬೆಂಡೋಲೆ, ಅದಕ್ಕೆ ಒಪ್ಪುವ ಹಾಗ ಒಂದು ಜೊತೆ ಲೋಲಾಕಿಗೆ ಆರ್ಡರ್ ಮಾಡಿ ಬಂದಿದ್ದೇನೆಯೇ—ಕೃಷ್ಣಾ ಜ್ಯೂಯಲರಿ ಕಂಪೆನೀಲಿ!

**ಸು. ಲಕ್ಷ್**:—(ಸೀರೆಗಳನ್ನು ಕೈಗೆ ತೆಗೆದುಕೊಂಡು ನೋಡುತ್ತಾ) ಇದೇನು ಹೀಗೆ ಹುಡುಗಾಟಿಕೆ ಮಾಡುತ್ತೀರಿ ಅಂದರೇ? ನಾನು ಈ ನನ್ನ ಮುದಿ ವಯಸ್ಸಿನಲ್ಲಿ ಲೋಲಾಕು ಹಾಕಿಕೊಂಡರೂ ಸರಿಯೇ! ಬುಲಾಕಿಟ್ಟುಕೊಂಡರೂ ಸರಿಯೇ!

**ಸು. ನ**.—ಯಾಕೆ ಹಾಕಿಕೊಳ್ಳಬಾರದೇ?

**ಸು. ಲಕ್ಷ್**:—ನೋಡಿದೋರು ನಕ್ಕಾರೂಂದ್ರೆ!

**ಸು. ನ**:—ನಗಲೇಳೇ! ಹಾಗಾದರೂ ನಗಲೇಳೇ ಆ ಗೂಬೆ-ಜನ

**ಸು. ಲಕ್ಷ್**—ಒಡವೆ ಹಾಕಿಕೊಂಡರೂ ವಯಸ್ಸಿಗೆ ತಕ್ಕಂತೆ ಒಡವೆ ಹಾಕ್ಕೊಬೇಕು.

**ಸು. ನ**—ಒಡವೆ ಹಾಕಿಕೊಳ್ಳೋದು ಒಂದೇ ಯಾಕೆ, ನಾವಿರೋ ದೇಸೇ ನಮ್ಮ ಖುಷೀಗೆ ಕಾಣೇ! ಇದಕ್ಕೆ ವಯಸ್ಸನ್ನ ಯಾರೆ ನಿಷ್ಕರ್ಷೆ ಮಾಡಿದೋರೂ?....ಕೇಳೆ—ನಿನ್ನ ಕೈಗೆ ನಾಲ್ಕು ಜೊತೆ ಚಿನ್ನದ ಬಳೆ, ಕಾಲಿಗೆ ಒಂದು ಜೊತೆ ಚೈನು ಬೇರೆ ಬರುತ್ತೆಯೇ!

**ಸು. ಲಕ್ಷ್**—ನೀವು ಸುಮ್ಮನಿರೀಂದ್ರೆ ನಿಮ್ಮ ದಮ್ಮಯ್ಯ! ನೀವು ಹೇಳುತಿರೋದು ನೋಡಿದರೆ ನನಗೆ ಭಯವಾಗುತ್ತೆ. 'ಮೈಮೇಲಿನ ಒಡವೆ ಎಲ್ಲಾ ತೆಕ್ಕೊಟ್ಟುಬಿಟ್ಟು ಒಬಿಗ್ಯಾದೇ' ಅಂತ ಆ ಹೊತ್ತು ಅಂದಿದ್ದಕ್ಕೆ ಕೋಪಿಸಿಕೊಂಡು, ನೀವು ನನಗೆ ಬುದ್ಧಿ ಕಲಿಸುವುದಕ್ಕೋಸ್ಕರ ಅಂಗಡಿಯವರಿಗೆ ಹೇಳಿ ಇದನ್ನೆಲ್ಲಾ ತಂದರೋ ಏನೋ....(ಪಿತಾಂಬರ, ಸೀರೆಗಳನ್ನು ಅಲ್ಲಿಯೇ ಬಿಟ್ಟು ಬಿಟ್ಟು ದೂರ ಸರಿದು) ನಾನು ಹೇಳಿದ್ದು ತಪ್ಪಾಯಿತೂ ಅಂದ್ರೆ! ಆವತ್ತೇ ನಿಮ್ಮ ಕಾಲಿಗೆ ಬಿದ್ದು ಕೇಳಿಕೊಂಡಿದ್ದೀನಿ. ಅಯ್ಯೋ! ಇದು ಯಾಕೆ ಹೀಗೆ ನಗುತ್ತಿದ್ದೀರೀ!! (ಹೆದರುವಳು)

**ಸು. ನ**:—(ಎದ್ದು ಹೋಗಿ ಅವಳ ಕೈ ಹಿಡಿದು) ಯಾಕೆ ಹೀಗೆ ಬೆದರುತ್ತೀಯಾ! ಇಲ್ಲಿ ನೋಡೇ ಈ ಕಾಗದಾನ!

**ಸು. ಲಕ್ಷ್**—ಏನು ಕಾಗದಾಂದರೇ?

**ಸು. ನ**:—ಟೆಲಿಗ್ರಾಂವೇ!

**ಸು. ಲಕ್ಷ್**.—ಟೆಲಿಗ್ರಾಂವೇ? ಎಲ್ಲಿಂದಾಂದರೇ? ಯಾರು ಕಳುಹಿಸಿದಾರೆ? ಏನು ಸಮಾಚಾರ?

**ಸು. ನ**:—ಇನ್ನೆಲ್ಲಿಂದಾಲೇ? ಹೆಡ್ ಆಫೀಸ್‌ನಿಂದ ಕಾಣೇ. ನಿನ್ನೆ ಪೀತಾಂಬರ ಅಡು ಇಟ್ಟು ತಂದ ಈ ಪಾಪಿ ಕೈಲಿ ಲಾಟರೀ ಟಿಕೆಟ್ ತೆಗೆದುಕೊಳ್ಳಲಿಲ್ಲವೇನೇ, ನನ್ನ ಸುಬ್ಬುಲಕ್ಷ್ಮೀ ಹೆಸರಿನಲ್ಲಿ?

**ಸು. ಲಕ್ಷ್**.—ಹೌದು! ಹೌದು!

**ಸು. ನ**—ಆ ಟಿಕೆಟ್‌ಗೇನೇ, ಡಬ್ಬಲ್ ಟಿಕೆಟ್‌ಗೇನೇ, ೧೧೭೫ನೇ ಟಿಕೆಟ್, ಎ. ಬಿ. ಎರಡರಿಂದ ಸುಬ್ಬುಲಕ್ಷ್ಮಮ್ಮನ ಹೆಸರಿನಲ್ಲಿ......ನನ್ನ ಸೌಭಾಗ್ಯಲಕ್ಷ್ಮಿಯ ಹೆಸರಿನಲ್ಲಿ,ನಾನು..ಪಾಪರ್ ಸುಬ್ಬುನರಸಿಂಹಯ್ಯ..

ತೆಗೆದುಕೊಂಡ....೧೧೭೭ನೇ ಡಬ್ಬಲ್ ಟಿಕೇಟಿಗೆ......ಒಂದು ಲಕ್ಷ ರೂಪಾಯಿ....ಬಂದಿದೇಂತ ಕಾಣೇ ! ಒಂದು ಲಕ್ಷ ರೂಪಾಯಿ !!

ಸು. ಲಕ್ಷ —....ಹೌ....ಹೌ....ಹೌದೆ....ಹೌದೇಂದ್ರೇ ?

ಸು. ನ.—ಹೌದೇ ! (ಕೈ ಹಿಡಿದು) ನಿನ್ನಾಣೆಗೂ ಕಾಣೇ ! ನನ್ನಾಣೆಗೂ ಕಾಣೇ !

(ಸುಬ್ಬುಲಕ್ಷ್ಮಮ್ಮನು ಸೀರೆ, ಪೀತಾಂಬರಗಳನ್ನ ಪ್ಪಿ ಗದ್ಗದಿತಳಾಗಿ ಕಣ್ಣು ಮುಚ್ಚಿ ಸ್ತಂಭೀಭೂತಳಾಗಿ ನಿಂತು ತುಟಿಗಳನ್ನು ನಾಲಿಗೆಯಿಂದ ಸವರಿಕೊಳ್ಳುವಳು)

ಸು. ನ:—ಸುಬ್ಬೂ ! ಸುಬ್ಬೀ ! ಇದೇನೇ ಹೀಗೆ ನಿಂತೆ ? ನಿನಗೆ ಇನ್ನೇನೆ ಯೋಚನೇ ?

ಸು. ಲಕ್ಷ —(ಕಣ್ತೆರೆದು ಗಂಡನ ಕೈ ಹಿಡಿದು) ಸ್ವಾಮೀ ! ಭಗವಂತಾ ! ಪರಮಾತ್ಮಾ !! ಎಲ್ಲರನ್ನೂ ಸೌಖ್ಯವಾಗಿಟ್ಟಿರು.

ಸು. ನ:—ಏನೇ ಇದೂ ನಿನ್ನ ಮಾತೂ ? ಅಲ್ಲವೇ ? ನಾನು ನಿನಗೆ 'ಅದು ತಂದೇ, ಇದು ತಂದೇ, ಇದು ತರುತೀನೀ, ಅದು ತರುತೀನೀ' ಅಂತ ಹೇಳತಾ ಇದ್ದರೆ, ನೀನು ಒಂದು ಸಲ ನಿನ್ನ ಬಾಯಿಂದ 'ನಿಮಗೇನು ತಂದಿದೀರಿ ?' ಅಂತ ಕೇಳಲಿಲ್ಲವಲ್ಲೇ ?

ಸು. ಲಕ್ಷ:—(ತಟ್ಟನೆ ತಿರುಗಿ ಗಂಡನ ಪಾದಗಳನ್ನು ಹಿಡಿದು) ನನಗೆ ಏನು ಕೇಳಬೇಕು, ಏನು ಹೇಳಬೇಕೂನ್ನೋದೇ ತೋರದ ಹಾಗೆ ಆಗಿದೇಂದ್ರೆ

ಸು. ನ —ಕೂತಕೊಳ್ಳೇ ! ಸಮಾಧಾನ ಮಾಡ್ಕೊಳ್ಳೇ ! ನಿನ್ನ ಪೂಜೆ ಫಲಾ ಕಾಣೇ—ಈ ಭಾಗ್ಯ. ನನ್ನ ಭಾಗ್ಯಲಕ್ಷ್ಮೀ ಕಾಣೇ ನೀನೂ !

ಸು ಲಕ್ಷ—ಇದೇನೂಂದ್ರೆ ನಿಮಗೆ ಇಂಥ ಧೋತ್ರ ತಂದಿದೀರಿ ?

ಸು. ನ:—(ನಗುತ್ತಾ) ನನಗಲ್ಲವೇ ಅದೂ ! ಸುಬ್ಬುಕೃಷ್ಣನಿಗೇ. ಕಡಿಮೆ ಜರಿ ಇರುವುದು ಅವನ ಮುಡಿಸಂಚೆ ಕಾಣೇ. ತಿಳೀತೇ ! ನನಗೆ ಬೇರೆ ಆರ್ಡರ್ ಕೊಟ್ಟಿದೇನೆಯೇ ನಾಲ್ಕು ಜೊತೆ ಜರಿ ಪಂಚೇಗೇ. ಒಂದಂಚಿನಲ್ಲಿ ಉದ್ದಕ್ಕೂ ಕನ್ನಡದಲ್ಲಿ 'ಶ್ರೀಮಂತ ಸುಬ್ಬುನರಸಿಂಹಯ್ಯ—ಶ್ರೀಮಂತ ಸುಬ್ಬುನರಸಿಂಹಯ್ಯ—ಶ್ರೀಮಂತ ಸುಬ್ಬುನರಸಿಂಹಯ್ಯ' ಅಂತ ಅಕ್ಷರಗಳು ಬರಬೇಕು—ಜರೀಲಿ; ಇನ್ನೊಂದು ಅಂಚಿನಲ್ಲಿ 'ಸುಬ್ಬುಲಕ್ಷ್ಮೀ—ಸುಬ್ಬುಲಕ್ಷ್ಮೀ—ಸುಬ್ಬುಲಕ್ಷ್ಮೀ' ಅಂತ ಬರಬೇಕು—ಜರೀನಲ್ಲಿ.

**ಸು. ಲಕ್ಷ್ಮಿ:**—ಚೆನ್ನಾಗಿದೆ. ತುಂಬಾ ಚೆನ್ನಾಗಿದೆ. ದುಡ್ಡು ಬಂದಾ ಕ್ಷಣಕ್ಕೆ ಈ ಹುಚ್ಚಾಟವೇ? ನನ್ನ ಹೆಸರಿರೋದನ್ನ ನೋಡಿ, ಜನರು ಲೇವಡಿ ಮಾಡಿ ಹುಚ್ಚೆಬ್ಬಿಸುತ್ತಾರೆ. ಅಷ್ಟೇ ಆಗೋದು.

**ಸು. ನ**—ಜನ ನಿನ್ನ ಹೆಸರಿರೋದನ್ನ ಹೇಗೆ ನೋಡುತ್ತಾರೆಯೇ? ಆ ಅಂಚನ್ನ ಮೇಲೆ ಮಾಡಿಕೊಂಡು ಉಡುತ್ತೀನಲ್ಲೇ; ಅದು ಕೇವಲ ನನ್ನ ತೃಪ್ತಿಗೋಸ್ಕರ, ನನ್ನ ಸಂತೋಷಕ್ಕೋಸ್ಕರ. (ನಿಧಾನವಾಗಿ ಸುಬ್ಬುಲಕ್ಷ್ಮಮ್ಮನ ಕೈಬೆರಳನ್ನು ನೋಡಿ) ಇದೇನು ಮಾಡಿಕೊಂಡೆಯೇ ಬೆರಳನ್ನ? ಹೀಗೆ ಊದಿದೆ ಯಲ್ಲೇ!

**ಸು. ಲಕ್ಷ್ಮಿ:**—ಚೆಟ್ಟಿ ತಿರುವ್ತೋವಾಗ ಆತುರದಲ್ಲಿ ಒರಳಿನಲ್ಲಿ ಬೆರಳು ಸಿಕ್ಕಿಕೊಂಡಿತು. ಅಷ್ಟೇ!

**ಸು. ನ:**—ಎಷ್ಟು ಶಾಂತವಾಗಿ ಹೇಳುತ್ತಾ ಕೂತಿದ್ದೀಯೇ—ಬೆರಳು ಬಾಳೆಕಾಯಾಗಿ ಊದಿರೋವಾಗ!! (ಮುಡಿಯನ್ನು ನೇವರಿಸುತ್ತಾ) ನೋಡೇ ಸುಬ್ಬೂ!! ಆ ಅಡಿಗೆ ಒಲೆಗೇ ನೀರು ಸುರಿದು ಆಚೆ ಎತ್ತಿಹಾಕು ಆ ಗುಂಡ ಕಲ್ಲನ್ನ ಆ ಅಡುಗೆ ಒಚ್ಚಲಿಗೆ ತುರಿಕಿ ಮುಚ್ಚಿಬಿಡು. ಆ ಒಳಕಲ್ಲಿಗೆ ಆ ಚೆಟ್ನಿ ತುಂಬಿ ಸಾರಿಸಿಬಿಡು. ಒಳಗಿರೋ ಆ ತೂತು ಪಾತ್ರೆಗಳನ್ನೆಲ್ಲಾ ಆ ಹಳೇ ಪಾಗಿನ ಕಂಜಯವರಿಗೆ ಕೊಟ್ಟುಬಿಟ್ಟು ಒಂದು ಜೊತೆ ಒಳ್ಳೆ ದೀಪದ ಕಂಬ ತೆಗೆದುಕೊಂಡುಬಿಡೇ!

**ಸು. ಲಕ್ಷ್ಮಿ**—ಇರೋ ಎರಡು ಪುಡಿ ಪಾತ್ರೇನಾ ಕೊಟ್ಟುಬಿಟ್ಟು, ಒಲೆಗೆ ನೀರು ಸುರಿದುಬಿಟ್ಟು ಹೊಟ್ಟೆ ಹಿಡಿದುಕೊಂಡು ಕೂತುಬಿಡೋದೇ ಜಪಾ ಮಾಡುತಾ?

**ಸು. ನ**—ಯಾಕೆ ಹೀಗೆ ಪೆಚ್ಚಿಳ ಹಾಗೆ ಪೇಚಾಡತೀ? ನಿನ್ನ ಈ ಕೈಗಳಿಂದ ಇನ್ನುಮೇಲೆ ಅಡಿಗೆ ಮಾಡಿಸುತೀನೇನೇ? ಅದೆಲ್ಲಾ ಮಚಾ ಕಾಣೇ ಇನ್ನುಮೇಲೇ!!

**ಸು. ಲಕ್ಷ್ಮಿ:**—ಅಡುಗೇನೂ ಮಾಡದೆ ನಿಮ್ಮ ಮುಂದೆ ಕೂತು ಚಪ್ಪಾಳೆ ತಟ್ಟುತ್ತಿರಲೇ? ಎಲ್ಲಾ ಹಣವಂತರ ಹೆಂಡತೀರೂ ಹಾಗೇ ಮಾಡುತಾ ಇರುತಾರೇನೂ?

ಸು. ನ—ಅಯ್ಯೋ! ಮಂಕೇ! ಏನು ಹೇಳಲೇ ನಿನ್ನದೃಷ್ಟಕ್ಕೆ. ಮನೆಗೆ ಬಂದಿರೊ ಭಾಗ್ಯಲಕ್ಷ್ಮಿ ಲಕ್ಷ ರೂಪಾಯಿನ ಅನುಭವಿಸುವುದು ಹಾಗಿರಲೀ! ಇದು ಒಂದಿರೋ ಆನಂದ ಅನುಭವಿಸೋದಕ್ಕೆ ಕೂಡ ನಿನಗೆ ತೋಚದಲ್ಲೇ! ಕೇಳೇ! ಇನ್ನುಮುಂದೆ ನೀನು ಬೆಳಿಗ್ಗೆ ಸ್ನಾನ ಪೂಜೆ ಮಾಡಿಕೊಂಡು ಪೀತಾಂಬರ ಉಟ್ಟು, ರತ್ನಗಂಬಳಿ ಮೇಲೆ ಕೂತು ವೀಣೆ ಬಾರಿಸುತ್ತಾ ಇರಬೇಕು ಸರಸ್ವತಿ ಹಾಗೇ! ನಾನು ಮುಂದೆ ಕೂತು....

ಸು ಲಕ್ಷ—ಆಯಿತು ಬಿಡೀ! ನಾನು ಈ ವಯಸ್ಸಿನಲ್ಲಿ ವೀಣೆ ಕಲೀತಾ ಕೂತರೇ ಬಲು ಚೆನ್ನಾಗಿರುತ್ತೇ!

ಸು ನ—ಏನೇ ಅಷ್ಟು ಹೊತ್ತಿನಿಂದ 'ವಯಸ್ಸು—ವಯಸ್ಸು' ಅಂತ ಇದೀಯೇ? ನೀನು ಏನು ಮುದುಕೀಂತ ತಿಳಕೊಂಡುಬಿಟ್ಟಿದ್ದೀಯೇನೇ? ನೀನು ಇನ್ನೂ ಹುಡುಗಿ ಕಾಣೇ! ನನಗೆ ದುಡ್ಡು ಸಿಗುವುದು ತಡವಾಯಿತು—ಅದಕ್ಕೋಸ್ಕರ ನೀನು ಸ್ವಲ್ಪ ಸೊರಗಿದ್ದೀ, ಅಷ್ಟೇ! ನೀನು ನನ್ನ ಭಾಗ್ಯಲಕ್ಷ್ಮೀ ಕಾಣೇ! ಈ ಮನೆಗೆ ಸೌಭಾಗ್ಯಲಕ್ಷ್ಮೀ ಕಾಣೇ! ಕೇಳೇ! ಸುಬ್ಬು! ಸುಬ್ಬುಲಕ್ಷ್ಮಿ ಅಂದರೇನು ಗೊತ್ತೇನೇ ನಿನಗೇ?

ಸು. ಲಕ್ಷ:—ನಮ್ಮಮ್ಮ ನನಗಿಟ್ಟ ಹೆಸರೂಂತಾ!

ಸು. ನ—ಹಾಗಲ್ಲವೇ. ಸಂಸ್ಕೃತದಲ್ಲಿರೋ 'ಸೌಭಾಗ್ಯಲಕ್ಷ್ಮೀ' ಅನ್ನೋ ಹೆಸರೇ ಕನ್ನಡದಲ್ಲಿ 'ಸುಬ್ಬುಲಕ್ಷ್ಮೀ' ಅಂತ ಆಗಿದೇ ಕಾಣೇ.

(ಬಾಗಿಲ ಬಳಿ ಹೆಜ್ಜೆಯ ಸಪ್ಪಳ)

ಸು. ಲಕ್ಷ.—ಓಹೋ! ಮಗೂ ಸ್ಕೂಲಿನಿಂದ ಬಂದುಬಿಟ್ಟನೋ ಏನೋ?

(ಎಡಗೈಲಿದ್ದ ಪುಸ್ತಕಗಳನ್ನು ಎದೆಗಪ್ಪಿ, ಬಲಗೈ ತೋಳಿನಿಂದ ಕಣ್ಣುಗಳನ್ನು ಒರಸಿಕೊಂಡು, ಪೆಚ್ಚು ಮುಖದೊಡನೆ ಸುಬ್ಬುಕೃಷ್ಣನ ಪ್ರವೇಶ)

ಸು. ಲಕ್ಷ—(ಎದ್ದು ಮುಂದೆ ಹೋಗಿ) ಯಾಕಪ್ಪಾ ಮಗೂ ಅಳುತ್ತಿದ್ದೀ?

ಸು. ಕೃಷ್ಣ—ಫೀಸ್ ಕೊಡದಿದ್ದಕ್ಕೆ ಓಡಿಸಿಬಿಟ್ಟರೂ.

ಸು. ನ.—ಪೀಡೇ ಕಳೀತು ಬಿಡೋ.

(ತಂದೆಯ ಧ್ವನಿಯನ್ನು ಕೇಳುತ್ತಲೇ ಕತ್ತೆತ್ತಲು, ತಂದೆಯನ್ನು ಕಾಣುತ್ತಲೇ ಕೈಲಿದ್ದ ಪುಸ್ತಕಗಳು ಜಾರಿ ಬೀಳುವುವು. ತಟ್ಟನೆ ಎತ್ತಿಕೊಳ್ಳಲು ಹೋಗುವನು)

ಸು. ನ:—ಬಿಡೋ! ಬಿಡೋ! ಬಿಟ್ಟುಬಿಡೋ! ಬಿದ್ದುಹೋದ ಪುಸ್ತಕಗಳನ್ನು ಮತ್ತೆ ಎತ್ತಿಕೋಬಾರದೋ! ಅವನ್ನ ಯಾರಾದರೂ ಒಡ ಹುಡುಗರನ್ನ ಕರೆದು ತಗೊಳ್ಳೀ ಅನ್ನೋ....ಬಾರೋ ಇಲ್ಲೀ. (ಮುಂದೆ ಬರುವನು) ಯಾವನೋ ನಿನ್ನನ್ನು ಸ್ಕೂಲಿನಿಂದ ಓಡಿಸಿದವನೂ?

ಸು. ಕೃಷ್ಣ:—ನಮ್ಮ ಕ್ಲಾಸ್ ಮೇಷ್ಟ್ರು.

ಸು. ನ:—ಅವನ ಹೆಸರೇನೋ?

ಸು. ಕೃಷ್ಣ:—ಅವರ ಹೆಸರು ಅದೇ.

ಸು. ನ:—ಅದೇ ಅಂದರೆ ಯಾವದೋ?

ಸು. ಕೃಷ್ಣ:—(ತಂದೆಯ ಕಡೆಗೆ ಕೈ ತೋರಿಸಿ) ಈ ಹೆಸರೇ.

ಸು. ನ:—ಈ ಹೆಸರೊಂದರೇನೋ? ಬಾಯಿಬಿಟ್ಟು ಹೇಳೋ.

ಸು. ಕೃಷ್ಣ:—ಬಿ. ಸುಬ್ಬುನರಸಿಂಹಯ್ಯನವರೂಂತ

ಸು. ನ:—(ಮೇಲೆದ್ದು) ಏನೋ! ಬಿ. ಸುಬ್ಬುನರಸಿಂಹಯ್ಯನೇ? ನನ್ನ ಹೆಸರೇನೇನೋ?

ಸು. ಕೃಷ್ಣ:—ಹೂಂ.

ಸು. ನ:—ಎಲಾ ಚಂಡಾಲಾ! ನನ್ನ ಹೆಸರನ್ನು ತಾನಿಟ್ಟುಕೊಂಡಿರುವುದು ಸಾಲದೇ, ನಿನ್ನನ್ನು ಬೇರೆ ಕ್ಲಾಸಿನಿಂದ ಓಡಿಸಿದನೇ, ಪಾಪೀ!

ಸು. ಲಕ್ಷ:—ಫೀಸ್ ಕೊಡದಿದ್ದರೆ ಅವರೇನು ಮಾಡುತಾರೆ?

ಸು. ನ:—ಫೀಸೂ? ಇನ್ನು ಅವನಿಗೆ ನಾನು ಕೊಡುತ್ತೇನೆ. ಲೋ! ಸುಬ್ಬುಕೃಷ್ಣೀ! ಆ ಬೇಕೂಫ ನರಸಿಂಹಯ್ಯನಿಗೆ ಎಷ್ಟು ಸಂಬಳವೋ?

ಸು. ಕೃಷ್ಣ:—ಎಪ್ಪತ್ತೈದು ರೂಪಾಯಿ.

ಸು. ನ:—ನೋಡೂ, ನಾನು ಅವನಿಗೆ ಒಂದು ಅಪಾಯಿಂಟಮೆಂಟ್ ಆರ್ಡರ್ ಕೊಡುತೇನೆ. ತೆಗೆದುಕೊಂಡು ಹೋಗಿ ಕರಕೊಂಡು ಬಾ ಆ ಅಧಮನನ್ನ.

ಸು. ಕೃಷ್ಣ:—(ಆಶ್ಚರ್ಯದಿಂದ) ಅಪ್ಪಾ!

ಸು. ನ:—ಹೌದೋ. ನಾನೇ ಒಂದು ಸ್ಕೂಲ್ ಸ್ಟಾರ್ಟ ಮಾಡುತ್ತೇನೆ. ಅದಕ್ಕೆ ನಾನೇ ಪ್ರೆಸಿಡೆಂಟ್. ನೀನೇ ಪ್ರಿನ್ಸಿಪಾಲ್. ಆ ನಿನ್ನ ಬಿ. ಸುಬ್ಬುನರಸಿಂಹಯ್ಯ ಇದಾನಲ್ಲಾ—ಬೇಕೂಫ — ಸುಬ್ಬುನರಸಿಂಹಯ್ಯ

ಅವನೇ ಹೆಡ್‌ಮೇಷ್ಟ್ರು. ಕೇಳೋ, ಅವನಿಗೆ ಎತ್ತಿಗೊಳ್ಳುತ್ತಲೇ ಎಪ್ಪತ್ತಾರು ರೂಪಾಯಿ ಸಂಬಳ. ಅಲ್ಲೀಗ ಒರುತ್ತಿರುವುದಕ್ಕಿಂತಲೂ ಒಂದು ರೂಪಾಯಿ ಹೆಚ್ಚಾಗೇನೇ!

ಸು. ಕೃಷ್ಣ:—(ಪೆಚ್ಚಾಗಿ) ಅಪ್ಪಾ!

ಸು. ನ—ಯಾಕೋ? ಬಾರೋ ಇಲ್ಲಿ. ಕೂತುಕೊಳ್ಳೋ. ಏನೇ ಸುಬ್ಬೀ! ಮಗೂಗೆ ಮದುವೆ ವಯಸ್ಸಾಯಿತಲ್ಲವೇನೇ?

ಸು. ಲಕ್ಷ:—ವಯಸ್ಸಾದಾಕ್ಷಣಕ್ಕೆ ಹೆಣ್ಣು ಸಿಗಬೇಕಲ್ಲ

ಸು. ನ:—ಹೆಣ್ಣಿಗೇನೇ! ಅವನೇ ಹುಡುಗನಾಗಿದ್ದಾಗ 'ಹೆಂಡತಿ, ಹೆಂಡತಿ' ಅಂತ ಆಟ್ಟಿಸಿಕೊಂಡು ಆಟ ಆಡುತ್ತಿರಲಿಲ್ಲವೇನೇ ಸೀತಾರಾಮಯ್ಯನ ಮಗಳೂ—ಅವಳನ್ನೇ ತರುತ್ತೇನೆಯೋ.

ಸು. ಲಕ್ಷ:—'ನಿಮಗೆ ತಿನ್ನುವುದಕ್ಕೆ ಗತಿಯಿಲ್ಲಾ; ಹುಡುಗ S.S L.C. ಪರೀಕ್ಷೇಲೇ ಮೂರು ಸಲ ಫೇಲಾಗಿದಾನೆ....ನಿಮ್ಮ ಮನೆಗೆ ಯಾವ ಪರದೇಶಿಗಳು ಹೆಣ್ಣುಕೊಡುತ್ತಾರೇ!' ಅಂತ ಹೋದ ವರುಷಾನೇ ಆಕೆ 'ಛಟಾರ'ನೆ ಅಂದುಬಿಡಲಿಲ್ಲವೇ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ?

ಸು ನ:—ಹೋದ ವರುಷ ಅಂದಿರಬಹುದು ಕಾಣೇ. ಆಗ ನಮ್ಮ ಮನೇಲಿನ್ನೂ ಬೆಳಕಾಗಿರಲಿಲ್ಲ. ಈಗ ಹಾಗಲ್ಲವೇ. ಗಂಡ ಹೆಂಡತಿ ಇಬ್ಬರೂ ಮಡೀ ಹೊರಳುತಾ ಒಂದು ನಮ್ಮ ಕಾಲು ತೊಳೆದು ಮಗಳನ್ನೊಪ್ಪಿಸಿ 'ಸ್ವೀಕರಿಸಿ ಉದ್ಧಾರ ಮಾಡಿ' ಅಂತ ಅಂಗಲಾಚಿಕೊಳ್ಳುತಾರೆ ಕಾಣೇ! ಲೋ ಮಗೂ! ತಗೊಳ್ಳೋ ನೋಟ್ ಪುಸ್ತಕ, ಪೆನ್ಸಿಲ್ಲು. ಬರೆಯೋ.

(ಸುಬ್ಬುಕೃಷ್ಣನು ಹೋಗಿ ಪುಸ್ತಕಗಳನ್ನು ಜೋಡಿಸಿ ತಂದು, ನೋಟ್ ಪುಸ್ತಕವನ್ನು ತೆರೆದು, ಪೆನ್ಸಿಲ್ಲು ಹಿಡಿದು ಕುಳಿತುಕೊಳ್ಳುವನು)

ಸು. ನ— ಬರೆಯೋ.

'ಲಾಯರ್ ಗುಡಿಬಂಡೆ ಸೀತಾರಾಮಯ್ಯನಿಗೆ—

ಶ್ರೀಮಂತ ಸುಬ್ಬುನರಸಿಂಹಯ್ಯನು ಮಾಡುವ ಆಶೀರ್ವಾದಗಳು.

ಸು. ಲಕ್ಷ—ಇದೇನೂಂದ್ರೆ, ಏಕವಚನದಲ್ಲಿ ಬರೆಸಿದ್ದಲ್ಲದೆ, ಬೀಗರಿಗೆ ಆಶೀರ್ವಾದಗಳೂಂತ ಅನ್ನೋದೇ?

ಸು. ನ—ನಿನಗೇನು ಮಂಕು ಬಡೀತೇನೇ? ಅವನು ಬೀಗದೇವರಾದರೂ ನನಗಿಂತ ನಾಲ್ಕು ವರ್ಷ ಚಿಕ್ಕವನಲ್ಲವೇನೇ? ಅಲ್ಲದೆ ಈಗ ಅವನನ್ನ ಹ್ಯಾಗೆ ಕರೆದರೂ ತಡೆಯುತ್ತೆಯೇ. ಶ್ರೀಮಂತ ಸುಬ್ಬುನರಸಿಂಹಯ್ಯ—ಗಂಡಿನ ತಂದೆ—ತಾನೇ ಖುದ್ದಾಗಿ—ಹುಡುಗೀನ ಕೇಳುತಿರುವುದು. ಬರಿಯೋ ಮಗು—

'ನಾನು ಮುಂದಿನ ತಿಂಗಳಿನಲ್ಲಿಯೇ ನನ್ನ ಚಿರಂಜೀವಿ ಸಹುಸ್ರಾಯು ಸುಬ್ಬುಕೃಷ್ಣಸ್ವಾಮಿಯ ವಿವಾಹವನ್ನು ನನ್ನ ಸ್ವಂತ ಗೃಹದಲ್ಲಿ ನೆರವೇರಿಸಬೇಕೆಂದು ಇರುವದರಿಂದ......

ಸು. ಲಕ್ಷ:—ಸ್ವಂತ ಗೃಹ ಯಾವುದೂಂದ್ರೆ?

ಸು. ನ:—ಇದೇ ಕಾಣೇ, ನಾವಿರೋ ಈ ಗುಡಿಸಲು—ಇದನ್ನು ಕೆಡವಿಸಿ ಬಿಟ್ಟು ಲಗ್ನದ ವೇಳೆಗೆ ಫಸ್ಟ್ ಕ್ಲಾಸ್ ಎರಡು ಅಂತಸ್ತಿನ ಮನೆ ಕಟ್ಟಿಸೀ, ಬೀಗರಿಗೋಸ್ಕರ ಕಾಂಪೌಂಡ್‌ನಲ್ಲಿಯೇ ಡೇರಾ ಹಾಕಿಸುತೇನೆಯೇ!

ಸು. ಲಕ್ಷ:—ಹಾಗಾದರೆ ಈ ಮನೆಯನ್ನು ಕೊಂಡುಕೊಳ್ಳುತ್ತೀರಾ?

ಸು. ನ—ಹೌದೇ! ಸಂಗ್ರಾಮ ಇದನ್ನು ಮಾರದಿದ್ದರೆ ಅವನನ್ನೇ ಕೊಂಡುಕೊಂಡುಬಿಡುತೇನೆಯೇ.

ಸು. ಲಕ್ಷ—ಇಲ್ಲ, ಇಲ್ಲ. ಮಾರಿಬಿಡಬೇಕೂಂತಾಲೇ ಇದಾರೆ.

ಸು. ನ—ಅದು ನಿನಗೆ ಹೇಗೆ ಗೊತ್ತು?

ಸು. ಲಕ್ಷ—ನೀವು ಬರುವುದಕ್ಕೆ ಎರಡು ನಿಮಿಷ ಮುಂಚೆ ಬಂದಿದ್ದರು, ಈಗ ಹೇಳಿದರು.

ಸು. ನ:—ಬಾಡಿಗೆಗೆ ಬಂದಿದ್ದನೇನೋ?

ಸು. ಲಕ್ಷ:—ಇಲ್ಲ. ಅಕ್ಕಿ ಮೂಟೆ, ಬೆಲ್ಲದ ಮೂಟೆ ಬಂದಿದೆಯಂತೆ ಸುಬ್ಬರಾಯಶೆಟ್ಟರ ಮಂಡೀಗೆ. ಒಟ್ಟಿಗೆ ತೆಗೆದುಕೊಂಡರೆ ಸುಲಭವಾಗಿ ಇರುತ್ತೇ—ನೀವೇನಾದರೂ ತೆಗೆದುಕೊಳ್ಳುತ್ತೀರಾಂತ ಕೇಳುವುದಕ್ಕೆ..

ಸು. ನ—ನನಗೆ ಯಾತಕ್ಕೇ ಅದೆಲ್ಲಾ?

ಸು. ಲಕ್ಷ:—ನಾಳೆ ಲಗ್ನಕ್ಕೆ?

ಸು. ನ—ಲಗ್ನಕ್ಕೆ ಆ ಮಂಡೀನೇ ಕೊಂಡುಕೊಳ್ಳೋಣೇಳೇ.... ಬರೆಯೇ....ಏನಾಯಿತೋ?

'ಸ್ವಗೃಹದಲ್ಲಿ ನೆರವೇರಿಸಬೇಕೆಂದಿದ್ದೇನೆ. ಹುಡುಗೀಗೆ ಹತ್ತು ಸಾವಿರ ರೂಪಾಯಿನ ಒಡವೆ ಇಡುತ್ತೇನೆ. ಬೀಗರ ಉಪಚಾರಕ್ಕೋಂತ ಎರಡು ಸಾವಿರ ರೂಪಾಯಿ ರಿಸರ್ವ್ ಮಾಡಿದೇನೆ. ನೀನು ಅಳಿಯನಿಗೇನೂ ಕೊಡಬೇಕಾದ್ದಿಲ್ಲ. ಎರಡು ಖರ್ಚೂ ನನ್ನದೇ—

ಸು. ಲಕ್ಷ್ಮೀ:—ಅದು ಯಾಕೇಂದ್ರೆ ಹಾಗೇ?

ಸು. ನ:—ಹೌದೇ. ನಮ್ಮಂಥ ಶ್ರೀಮಂತರು ಅವನು ಕೊಡೋ ಒಂದು ಬೆಳ್ಳಿ ಲೋಟ, ಒಂದು ಕಡ್ಡಿ-ಜರಿ-ಪಂಚೆ, ಒಂದು ಹಿತ್ತಾಳೆ ತಪ್ಪಲೆ ತೆಗೆದುಕೊಳ್ಳೋದೇನೇ? ಬೇಡವೇ. ಬರಿಯೋ—

'ನಿನಗೆ ಈ ಷರತ್ತುಗಳು ಒಪ್ಪಿಗೆಯಾಗಿರುವ ಪಕ್ಷಕ್ಕೆ ನಿನ್ನ ಮಗಳು ಚಿರಂಜೀವಿ ಸೌಭಾಗ್ಯಕಾಂಕ್ಷಿಣಿ ಹರಿದ್ರಾ-ಕುಂಕುಮ ಶೋಭಿತಳಾದ ಗುಂಡಮ್ಮನನ್ನ—ಬ್ರಾಕೆಟ್‌ನಲ್ಲಿ ಬರಿ—(ಧಾರೆಯ ಸಮಯಕ್ಕೆ ಕನ್ಯೆಗೆ ಬೇರೆ ಶುಭನಾಮಧೇಯವು ಕೊಡಲ್ಪಡುವುದು)—ನನ್ನ ಮಗನಿಗೆ ತಂದು ವಿವಾಹ ಮಾಡುತ್ತೇನೆ. ನೀನು ನಿನ್ನಿಷ್ಟವನ್ನು ಈ ಕಾಗದ ಕಂಡ ನಾಲ್ಕು ದಿವಸಗಳೊಳಗಾಗಿಯೇ ಬರೆಯುವುದು. ತಪ್ಪಿದಲ್ಲಿ ನನ್ನ ಹಿಂದಿನ ವಾಗ್ದಾನಕ್ಕೆ ನಾನು ಬಾಧ್ಯನಲ್ಲ—

—ಇಂತಿ ಆಶೀರ್ವಾದಗಳು.

ನೀನೇ ರುಜು ಮಾಡೋ—ಶ್ರೀಮಂತ ಸುಬ್ಬುನರಸಿಂಹಯ್ಯಾಂತ.

ಸು. ಲಕ್ಷ್ಮೀ—ಬೇಡ. ನೀವೇ ಮಾಡೀಂದರೇ. ಬೀಗರಿಗೆ ಬರೆಯೋ ಕಾಗದ.

ಸು. ನ:—ಅವನು ಬೀಗನಾಗೋದಕ್ಕೆ ಒಪ್ಪಿದ ಮೇಲೆ ನಾನೇ ರುಜು ಮಾಡುತ್ತೇನೆ. ಬರೆಯೋ ನನ್ನ ಹೆಸರನ್ನ.

ಸು. ಕೃಷ್ಣ:—ಬರೆದೇಪ್ಪ.

ಸು. ನ—ಆತನ ಅಡ್ರೆಸ್ ಗೊತ್ತಿದೆಯೋ ಇಲ್ಲವೋ ನಿನಗೆ?

ಸು. ಕೃಷ್ಣ.—ಗೊತ್ತಿದೇಪ್ಪ.

ಸು. ನ:—ಮನೆ ನಂಬರು ಏನು ಹೇಳು?

ಸು. ಕೃಷ್ಣ:—ಎಪ್ಪತ್ತೊಂಬತ್ತು. (೭೯)

ಸು. ನ:—ಸರಿ ಆ ಕಾಗದಾ ಪೋಸ್ಟ್‌ಗೆ ಹಾಕಿಬಿಡು. ನೋಡೋ ಮಗೂ, ಈ ಊರಿನಲ್ಲಿರೋ ಒಳ್ಳೇ ಕಂಟ್ರಾಕ್ಟರುಗಳು ಯಾರು ? ಜೊಂಬಾಯಿ ತರಹ ಮನೆ ಕಟ್ಟಿಸೋರು. ಪ್ಲ್ಯಾನ್ ಮಾಡಿರೋ ಹುಡುಗರ ಹೆಸರು ಹೇಳು. ಈ ಹಳೇ ಬಾಬತ್ತು ನೋರು ಬೇಡ.

ಸು. ಕೃಷ್ಣ—ರಾಂ ಅಂಡ್ ರಾವ್.

ಸು. ನ:—ಹೂಂ. ಆಮೇಲೆ ?

ಸು. ಕೃಷ್ಣ—ಗೃಹಸ್ಥ ಲಿಮಿಟೆಡ್.

ಸು. ನ.—ಹೂಂ. ಮುಂದೆ ?

ಸು. ಕೃಷ್ಣ:—ಮೂರ್ತಿ ಅಂಡ್ ಮೂರ್ತಿ.

ಸು. ನ:—ಇದೆಂತಹ ಮೂರ್ತಿಸೋ ?

ಸು. ಕೃಷ್ಣ —ಪ್ರಸನ್ನಮೂರ್ತಿ, ಕಲ್ಯಾಣಮೂರ್ತಿಗಳಂತೆ.

ಸು. ನ:—(ಮೆಚ್ಚುಗೆಯಿಂದ) ಭೇಷ್ ! ಭೇಷ್ ! ಬಹಳ ಚೆನ್ನಾಗಿದೆ ಹೆಸರು. ನೀನು ಹೊರಟು ಒಂದು ಟ್ಯಾಕ್ಸಿ ಮಾಡಿಕೋ. ನೀದಾ ಆ ದ್ವಿಮೂರ್ತಿಗಳ ಹತ್ತಿರ ಹೋಗಿ, ಇಲ್ಲಿರೋ ಈ ಹಳೇ ಮನೆಯನ್ನು ಕೆಡವಿ, ಅದೇ ನಿವೇಶನದಲ್ಲಿ ಆದಷ್ಟು ಜಾಗ್ರತೆ ಜೊಂಬಾಯಿ ಫ್ಯಾಷನ್‌ದೊಂದು ಮಹಡಿ ಮನೆ ಕಟ್ಟಬೇಕಂತೆ ಅಂತ ನನ್ನ ಹೆಸರು ಹೇಳಿ, ಹತ್ತಿರದಲ್ಲಿರೋ ತರಹೇವಾರಿ ಪ್ಲಾನ್‌ಗಳನ್ನೆಲ್ಲಾ ತಗೊಂಡು ಬರೋ ಹಾಗೆ ಕೇಳು. ಹಾಗೇನೇ ಮಗೂ ! ಇಲ್ಲಿ ನಮ್ಮ ವಾಸಕ್ಕೆ ಅನುಕೂಲವಾಗಿರುವ ಊಟದ ಹೋಟಲ್ ಯಾವುದು ?

ಸು. ಕೃಷ್ಣ—ಬೃಂದಾವನ ಭೋಜನಶಾಲಾ.

ಸು. ನ—ಒಬ್ಬರ ಊಟಕ್ಕೆ ತಿಂಗಳಿಗೆಷ್ಟು ಛಾರ್ಜು ?

ಸು. ಕೃಷ್ಣ.—ಇಪ್ಪತ್ತು ರೂಪಾಯಿ ಇರಬಹುದು.

ಸು. ಲಕ್ಷ:—ಅಬ್ಬಬ್ಬಾ !

ಸು ನ:—ಸರಿ. ಒಳ್ಳೇ ಹೋಟಲೇ ಹೇಳಿದೆ. ನಮ್ಮ ಯೋಗ್ಯತೆಗೆ ತಕ್ಕದಾಗಿದೆ. ನೀನು ಅಲ್ಲಿಂದ ಟ್ಯಾಕ್ಸಿನಲ್ಲೇ ಆ ಹೋಟಲಿಗೆ ಹೋಗಿ, ನನ್ನ ಹೆಸರಿನಲ್ಲಿ ನಾಲ್ಕು ರೂಮುಗಳನ್ನು ಗೊತ್ತುಮಾಡಿಕೊಂಡು ಮೂರು ಊಟಕ್ಕೆ ಹೇಳಿ ಬಂದು ಬಿಡು.

ಸು. ಲಕ್ಷ—ಹೋಟಲಲ್ಲಿ ಊಟ ಹೇಗೆ ಮಾಡೋದೂಂದ್ರೆ ?

ಸು. ನ—ಮೇಜಿನ ಮೇಲೆ ಕಾಣೇ !....ಬಾಳೆ ಎಲೇ ಮೇಲೆ ಬೆಳ್ಳಿ ತಟ್ಟೇಲಿ ಬಡಿಸಿದ ಊಟಾನ ಚಿನ್ನದ ಚಮಚದಲ್ಲಿ ಮಾಡಿ, ಅದೇ ಕುರ್ಚಿ ಯನ್ನೇ ತಳ್ಳಿಕೊಂಡು ಡ್ರಾಯಿಂಗ ರೂಮಿಗೆ ಬಂದರೆ ಅಲ್ಲಿ ಇನ್ನೊಂದರ ಮೇಲೆ ರೆಡಿ ಆಗಿರೋ ಚಿಗುರೆಲೆ, ಚಿಗುರಡಿಕೆ, ಚಿಗುರು ಸುಣ್ಣಾ, ಯಾಲಕ್ಕಿ, ಜಾಪತ್ರಿ, ಜಾಕಾಯಿ, ಲವಂಗ ಹಾಕಿಕೊಂಡು ಜಗೀತಾ ಸೋಫಾಕ್ಕೆ ಒರಗಿಕೊಂಡೂ, ಪಕ್ಕದಲ್ಲಿರೋ 'ಬಿರುಟೇ ಅದು ಮೀ' ಆ ರೇಡಿಯೋದಲ್ಲಿ ಬರೋ ಗಂಧರ್ವ ಸಂಗೀತ ಕೇಳುತಾ ಬಿದ್ದಿದ್ದರೇ, ಆ ಕುಬೇರ ಬಂದು ಕಾಲು ಹಿಸುಕುತ್ತಾ ಎಚ್ಚರ ಮಾಡೀ, ಕೇಸರಿ, ಬಾದಾಮಿ ಹಾಕಿದ ಬಿಸಿ ಹಾಲು ಹಿಡಿದೂ—ಹುಂ......ಅದನ್ನೆಲ್ಲಾ ಅಲ್ಲೇ ನೋಡುವೆ. ಇಲ್ಲಿ ಹೇಳಿ ಏನು ಪ್ರಯೋಜನ. ನಡೀ ಮಗು ನೀನು. ಈ ಎರಡು ಕೆಲಸ ಮಾಡಿ ಕೊಂಡು, ಈ ಕಾಗದಾನ ರಿಜಿಸ್ಟರ್ ಮಾಡಿಸಿ ಟಪ್ಪಾಲಿಗೆ ಹಾಕಿ, ನೀನು ಟ್ಯಾಕ್ಸೀ ತೆಗೆದುಕೊಂಡು ಇಲ್ಲಿಗೇ ಬಂದುಬಿಡು. ಎಲ್ಲರೂ ಒಟ್ಟಿಗೆ ಊಟಕ್ಕೆ ಹೊರಟು ಹೋಗೋಣ, ಆ ಸುಬ್ಬುಕೃಷ್ಣನ ಬೃಂದಾವನಕ್ಕೆ....ೀ.... ಯಾಕೋ ಅನುಮಾನಿಸುತೀ ?

ಸು. ಕೃಷ್ಣ—ದುಡ್ಡು....ರೆಜಿಸ್ಟರ್‌ಗೆ....

ಸು. ನ:—(ನಕ್ಕು) ಅದಕ್ಕೆ ಯಾಕೋ ಯೋಚನೆ. ಪುಟ್ಟಪ್ಪನ ಹೋಟ ಲಿಗೆ ಹೋಗು. ಪುಸ್ತಕದಲ್ಲಿ ಸೈನ್ ಮಾಡಿ ಒಂದಿಪ್ಪತ್ತು ರೂಪಾಯಿ ತೆಗೆದುಕೊಂಡು ಹೋಗು—ತಿಳೀತೇನೋ. ಈಗಲೇ ಸಾವಿರ ರೂಪಾಯಿ ಬೇಕಾದರೂ ಒಂದು ನಿಮಿಷದಲ್ಲಿ ತರುತ್ತೀನೀ......ಕೈಲಿಭಾಗ್ಯಲಕ್ಷ್ಮಿ ತಾಂಡವಾಡುತಿರೋವಾಗ.

(ಸುಬ್ಬುಕೃಷ್ಣನು ಆನಂದದಿಂದ ನಿಷ್ಕ್ರಮಿಸುವನು)

ಸು. ಲಕ್ಷ:—ಹೌದೂಂದ್ರೇ! ಮಗೂಗೇ, ನಿಮಗೇ, ಷರ್ಟುಗಳೂ ಕೋಟುಗಳೂ ಹೊಲಿಸಬೇಡವೇ ?

ಸು. ನ.—ಅದಕ್ಕೇನೇ. ಟ್ಯಾಕ್ಸೀಲೀ ಕೂತುಕೊಂಡೇನೇ ಆ ರೆಡಿ ಮೇಡ್ ಬಟ್ಟೆ ಅಂಗಡಿ ಮುಂದೆ, ಆ ಡ್ರೈವರ್‌ಗೆ ಹೆಳಿ ಹಾರನ್ ಅದುಮಿಸಿ

ದರೆ ಸಾಕು, ಆ ಸಾಹುಕಾರನೇ ಓಡಿ ಬರುತಾನೇ—ಗಲ್ಲಾ ಮುಂಗ್ಗರಿಸೀ. ಎಂಥಾ ಒಟ್ಟೀ ಇಂದರೆ ಅಂಥ ಒಟ್ಟಿ ನೋಡಿ ತೆಗೆದುಕೊಂಡರಾಯಿತು.

**ಸು. ಲಕ್ಷ**—ಹೌದೂ! ಆದರೆ ದೇವರನ್ನ ತಗೊಂಡು ಹೋಗಿ ಕೋಟೆನಲ್ಲಿ ಹೇಗಿಟ್ಟು ಪೂಜೆ ಮಾಡೋದೂಂದ್ರೆ?

**ಸು. ನ:**—ಇದಕ್ಕೆ ಯೋಚನೆ ಯಾಕೆ ಸುಬ್ಬಾಣೀ!

**ಸು. ಲಕ್ಷ:**—ಮರೆತು ಹೋಗಿದ್ದ ಹೆಸರುಗಳೆಲ್ಲಾ ಈಗ ಜ್ಞಾಪಕಕ್ಕೆ ಬರುತಾ ಇದೇ ಕೂಗೋದಕ್ಕೆ!

**ಸು. ನ.**—ಹೌದು ಕಾಣೇ ಬಂಗಾರೀ! ಇಲ್ಲಿ ಕೇಳೇ! ಆ ಮಲ್ಲಿಕಾರ್ಜುನ ಗುಡಿಯ ಪೂಜಾರಿ ಆ ವಿಶ್ವನಾಥ ಜೋಯಿಸ ಇದಾನಲ್ಲಾ, ಅವನನ್ನ ಕರೆದು ನಮ್ಮ ಮನೆ ಸಾಲಿಗ್ರಾಮದ ಸಂಪುಟ, ದೇವರ ವಿಗ್ರಹ, ಗುರು ಪಾದಗಳನ್ನೆಲ್ಲಾ ಮೇಳ ಮಾಡಿಸಿಕೊಂಡು ಮಡಿಯಲ್ಲಿ ಅವನ್ನ ಜೋಯಿಸನ ಕೈಲಿ ತೆಗೆಸಿಕೊಂಡು ಹೋಗಿ, ದೇವಸ್ಥಾನದಲ್ಲಿ ದೇವರ ಬಳಿ ಇಡಿಸಿ, ನಿತ್ಯ ಕುಂಕುಮಾರ್ಚನೆ, ಸಹಸ್ರನಾಮ ಜಪ, ಮಹಾನೈವೇದ್ಯ ಮಹಾಮಂಗಳಾರತೀ ಮಾಡಿಸುತಾ ಇದ್ದೂ, ನಮ್ಮ ಸ್ವಂತ ಮನೆ 'ಸೌಭಾಗ್ಯಲಕ್ಷ್ಮೀ ಭವನ' ತಯಾರಾದ ಮೇಲೆ, ಬೆಳ್ಳಿಯ ಪಲ್ಲಕ್ಕೀಲಿ ದೇವರನ್ನ ಕೂಡಿಸಿ ಚೆನ್ನದ ಜೋಡೀ ವಾಲಗ ಬ್ಯಾಂಡ್ ಸಮೇತ ಮೆರವಣಿಗೆ ಮಾಡಿಸಿಕೊಂಡು ಸ್ವಗೃಹಕ್ಕೆ ಕರೆತಂದು ಪ್ರತಿಷ್ಠಾಪನೆ ಮಾಡಿಸೋಣವೇ!

[ಹೊರಗಡೆ 'ಸುಬ್ಬುನರಸಿಂಹಯ್ಯಾ! ಸುಬ್ಬುನರಸಿಂಹಯ್ಯಾ!!' ಎಂಬ ಸಂಗರಾಮಯ್ಯನ ಕೂಗು]

**ಸು. ಲಕ್ಷ:**—ಯಾರದೂ?

**ಸಂಗ:**—(ಹೊರಗಿಂದಲೇ) ನಾನಮ್ಮ ತಾಯೀ! ಇನ್ನೂ ಬಂದೇ ಇಲ್ಲವೋ ಇವನು ಮನೇಗೇ?....ಸರಿಯೇ..ಹೋಗುತಾ ಹೋಗುತಾ ಒಳ್ಳೇ ಗುಂಪನೇ ಸೇರಿದ—ಅದೃಷ್ಟಪರೀಕ್ಷೆಗೆ. ನಾ ಬರುತೇನಮ್ಮ ಮಧ್ಯಾಹ್ನಕ್ಕೆ.

**ಸು. ಲಕ್ಷ:**—ಹೊರಟು ಹೋಗುತಾರೇನೋ.... (ಮುಂದೆ ಬಂದು) ಸಂಗರಾಮಯ್ಯನವರೇ!

ಸು. ನ:—ನಾನೇ ಕರೀತೀನಿ ಇರೇ! (ಮುಂದೆ ಹೋಗಿ) ಮಧ್ಯಾಹ್ನಕ್ಕೆ ಯಾಕೋ? ಈಗಲೇ ಬಾರೋ ನಿನ್ನ ಅದೃಷ್ಟಪರೀಕ್ಷೆ ಮಾಡುತೀನಿ.

(ಸಂಗರಾಮಯ್ಯನನ್ನು ಕೈಹಿಡಿದು ಕರೆತರುವನು; ಸುಬ್ಬುಲಕ್ಷ್ಮಮ್ಮನು ಒಳಗೆ ಹೋಗುವಳು)

ಸಂಗ.—(ಹೆದರಿದ್ದರೂ ನಗಲು ಯತ್ನಿಸುತ್ತಾ) ನೀನು ಮನೇಲಿದ್ದೀಂತ ನನಗೆ ಗೊತ್ತಿತ್ತು.

ಸು. ನ:—ಹೌದು ಹೌದೂ! ಅದಕ್ಕೇ ಹಿಂದಿರುಗಿ ಹೊರಟು ಹೋಗುತಿದ್ದೀ ಅಲ್ಲವೇ?

ಸಂಗ—ತಮಾಷೇಗೆ ಹಾಗಂದೆ ಕಣಯ್ಯಾ!

ಸು. ನ—ಅದು ಸರಿ—ಹೋಗಲೀ ಬಿಡೂ. ಈಗ ಯಾಕೆ ಬಂದೆಯೋ?

ಸಂಗ.—ಸುಮ್ಮನೆ....ನಿನ್ನನ್ನ ನೋಡಿಕೊಂಡು ಯೋಗಕ್ಷೇಮ ವಿಚಾರಿಸಿಕೊಂಡು ಹೋಗೋಣಾಂತ.

ಸು. ನ—ನನ್ನ ಯೋಗಕ್ಷೇಮ ವಿಚಾರಿಸೋಣಾಂತ ಬಂದೆಯೇನೋ? (ನಕ್ಕು) ಸುಳ್ಳೋ! ಶುದ್ಧ ಸುಳ್ಳೋ! ನಿಜ ಹೇಳೋ ಯಾಕೆ ಬಂದೇ?.... ಆದೂವೆ ಬಂದೇ ಬೆಳಿಗ್ಗೆ ಎರಡು ಸಲಾ?

ಸಂಗ—(ಬೆದರಿ) ಬೆಳಿಗ್ಗೆ ಬಂದದ್ದು......ಆ ಒಚ್ಚಲಮನೆ ಸೋರುತ್ತಿತ್ತಲ್ಲಾ ಒಲೇ ಮೇಲೇ, ಅದನ್ನ ನೋಡಿಕೊಂಡು ಹೋಗಿ ರಿಪೇರಿ ಮಾಡಿಸೋಣಾಂತ ಬಂದೆ..ಈಗ ಮನೇಗೆ ಹೋಗುತಾ ದಾರೀಲಿ, ಹಾಗೇ ಕೂಗು ಹಾಕಿ ಬಿಟ್ಟು ಹೋಗೋಣಾಂತ ಬಂದೆ..ಅಷ್ಟೇ.

ಸು. ನ—ನೀನು ಯಾಕೆ ಮರೆಮಾಚುತೀಯೋ ಮಾತನಾ ಹೇಳೋ. ನಿಜ ಹೇಳೋ! ನೀನು ಯಾತಕ್ಕೆ ಬಂದೇ? ರಿಪೇರಿ ಮಾತು ಬಿಡು. ನಿನ್ನ ಕಣ್ಣೆದುರಿಗೇನೇ....ನೀನು ನೋಡುತ್ತಿರುವ ಹಾಗೇನೇ ಈ ಮನೆ..ಈ ನಿನ್ನ ಮುರುಕು ಮನೆ ನೆಲಸಮವಾಗುತ್ತೇ....(ಹುಚ್ಚುನಗು ನಗುವನು)

ಸಂಗ:—(ಗಾಬರಿಯಾಗಿ) ಸುಬ್ಬುಲಕ್ಷ್ಮಮ್ಮಾ! ಸುಬ್ಬುಲಕ್ಷ್ಮಮ್ಮಾ!!

ಸು. ನ.—ಅವಳನ್ನು ಯಾಕೋ ಕೂಗುತಿಯಾ? ಕೇಳೋ! ಆಮೇಲೆ ಇದೇ ಸೈಟ್‌ನಲ್ಲೇ ಒಂದು ದಿವ್ಯವಾದ ಸಿಮೆಂಟ್ ಕಾಂಕ್ರೀಟ್ ಭವನ—ಅರಮನೆ ಜಗಿಜಗೀಂತ ಎದ್ದು ನಿಲ್ಲುತ್ತೆ. ಆ ಮನೆ ಗೃಹಪ್ರವೇಶದ ದಿನ

ಪ್ರಥಮ ಪಾದಪೂಜೆ ಯಾರಿಗೆ ಗೂತ್ತೇನೋ ? (ಪೆಟ್ಟಿಗೆ ಮುಂದೆ ಬಂದು) ನಮ್ಮ ಮನೆ ದೇವರು ಸಂಗರಾಮಯ್ಯನಿಗೇ ! (ಬಲವಾಗಿ ಬೆನ್ನು ತಟ್ಟುವನು)

**ಸಂಗ** —(ತೆಪರಿ ತಪ್ಪಿಸಿಕೊಂಡು ಹೋಗಲು ಯತ್ನಿಸುತ್ತಾ) ಸುಬ್ಬನರಸಿಂಹಯ್ಯಾ ! (ಅಂಗಲಾಚಿ) ನಾನು ಬರುತೇನಪ್ಪಾ ! ಮನೇಲಿ ನನ್ನ ಅಳಿಯ ಬಂದಿದಾನಪ್ಪಾ ! ಮತ್ತೆ ಮಧ್ಯಾಹ್ನ ಬಾದು ಬೇಕಾದರೆ ನಿನ್ನ ಕಾಣುತೇನೆ

**ಸು ನ** —(ಹೊರಡಲಿರುವ ಸಂಗರಾಮಯ್ಯನನ್ನ ಕೈಹಿಡಿದು ನಿಲ್ಲಿಸಿ) ಯಾಕೆ ಹೀಗ ಹದರುತೀಯಾ ? ಮಧ್ಯಾಹ್ನ ಬರೋದಿರಲೀ—ಈಗ ಯಾಕೆ ಬಂದೆ ಹೇಳೋ ದೇವರೇ ?

**ಸಂಗ** —ಸುಮ್ಮನೇ ಸುಂ ಸುಂ ಸುಮ್ಮನೇ ಕಾಣಿಯಾ !

**ಸು ನ** —ಸುಂಸುಮ್ಮನೆ ಯಾರು ಬರುತಾರೋ ? ನೀನು ಬಾಡಿಗ ವಸೂಲೀಗ ಬಂದಿದೀಯಾ (ಹತ್ತಿರ ಬಂದು) ಹೌದೋ ಅಲ್ಲವೋ ?

**ಸಂಗ** —ಹೌದು ಹೌದು ಹೌದು

**ಸು ನ** —(ಭುಜ ತಟ್ಟಿ) ಹಾಗೆ ಹೇಳೋ ದೇವರೇ ! ಸರಿ ನನಗೀಗ ಎಷ್ಟು ಬಾಡಿಗ ಕೊಡಬೇಕು ?

**ಸಂಗ** —ನಾಳೆ ಪಸ್ಟಿಗ ಏಳು ತಿಂಗಳಾಗುತ್ತೆ ನೀನು ಬಾಡಿಗೆ ಕೊಟ್ಟು ಏಳು ತಿಂಗಳಿಗೆ ಏಳಾರಲಿ ನಲವತ್ತೆರಡು ರೂಪಾಯಿ ಕೊಡ ಬೇಕಾಗುತ್ತೆ

**ಸು ನ** —ಸರೀ ಈ ದುಡ್ಡಿಗೆ ಬಡ್ಡೀ ?

**ಸಂಗ** —ಬಡ್ಡಿ ಬೇಡಪ್ಪ ನಾನೆಲ್ಲೂ ಬಾಡಿಗೆಗ ಬಡ್ಡಿ ತಗೊಂಡಿಲ್ಲ, ಅಲ್ಲದೆ ಎಷ್ಟೋ ಕಡೆ ಬಾಡಿಗೇನೇ ತಗೊಂಡಿಲ್ಲ

**ಸು ನ** —ಒಂದು ವೇಳೆ ನಾ ಕೊಟ್ಟರೆ ಬಡ್ಡಿ ಸೇರಿಸಿ ಎಷ್ಟು ಕೊಡ ಬೇಕು ?

**ಸಂಗ** —ಮೂವತ್ತೈದು ರೂಪಾಯಿ

**ಸು ನ** —ಅಸಲೇ ನಲವತ್ತೆರಡು ರೂಪಾಯಲ್ಲೋ ?

**ಸಂಗ** —ಹೌದೂ, ಆದರಲ್ಲಿ ಬಡ್ಡಿ ಏಳು ರೂಪಾಯಿ ವಜಾ ಮಾಡು

**ಸು ನ** —ಏನೋ ಅಸಲಿನಲ್ಲಿ ಬಡ್ಡಿ ವಜಾ ಮಾಡೋದೇ ?

**ಸಂಗ** —ಅಷ್ಟೇ ಈಗಿನ ಲೇವಾದೇವಿ

**ಸು. ನ:**—(ಭುಜದ ಮೇಲೆ ಕೈಹಾಕಿ) ನೋಡು ಸಂಗರಾಮಯ್ಯಾ! ನೀನು ಯಾಕೋ ಹೆದರಿ ಮಾತನಾಡುತಾ ಇದೀ ಅಂತ ಕಾಣಿಸುತ್ತೆ. ಕೇಳೋ! ನಿನ್ನ ಬಾಡಿಗೇ ದುಡ್ಡು ನಲವತ್ತೆರಡು ರೂಪಾಯಿ ಜೊತೆಗೆ ಇನ್ನೊಂದು ನೂರು ರೂಪಾಯಿ ಸೇರಿಸಿ ಕೊಡುತೇನೆ....ಅದಿರಲಿ, ಈ ಮನೆ ಸೈಟಿಗೆಷ್ಟು ಕೊಟ್ಟಿದ್ದೆಯೋ ನೀನೂ?

**ಸಂಗ.**—(ಬೆದರಿ) ಹಿಂದೆ ನಮ್ಮ ತಂದೆ ಕೊಂಡಾಗಿನ ಬೆಲೆ ಕೇಳುತೀಯಾ? ಇಲ್ಲಾ ಈಗಿನ ಬೆಲೆ ಕೇಳುತೀಯಾ?

**ಸು. ನ:**—ಎರಡೂ ಹೇಳೋ!

**ಸಂಗ:**—ನಮ್ಮ ತಂದೆಗೆ ದಿವಾನ್ ಶೇಷಾದ್ರಿ ಐಯರ್ ಆಗ ಬಲವಂತ ಮಾಡಿ ಇಪ್ಪತ್ತೈದು ರೂಪಾಯಿಗೆ ಕೊಡಿಸಿದ್ದರಂತೆ.

**ಸು. ನ.**—ಈಗಾ?

**ಸಂಗ**—ಈಗಾ?....ಈಗಾಂದರೇ....ಇದರ ಪಕ್ಕದ ಸೈಟನ..ಇದೇ ಅಳತೇದು–ಅರವತ್ತು-ನೂರೈಂಬತ್ತಡಿ ಸೈಟ್‌ನ ದೇವನಹಳ್ಳಿ ಅಮಲ್ದಾರರು ಹೋದ ತಿಂಗಳು ಏಳುನೂರು ರೂಪಾಯಿಗ ಕೊಂಡುಕೊಂಡರಲ್ಲ.

**ಸು. ನ.**—ಅದು ಸರೀ....ಈ ನಿನ್ನ ಮುರುಕಲು ಮನೇಗೆ ಎಷ್ಟು ಖರ್ಚು ಮಾಡಿದೀ?

**ಸಂಗ:**—ಮನೆ ಕಟ್ಟಿಸುವುದಕ್ಕೆ ಆಗ ಒಂದೂವರೆ ಸಾವಿರ ರೂಪಾಯಿ ಖರ್ಚಾಗಿದ್ದಿತು......ಈಚೆಗೆ ರಿಪೇರಿಗೇನೇ ಎರಡು ಸಾವಿರ ರೂಪಾಯಿ ಖರ್ಚು ಮಾಡಿದೇನೆ ಈ ಇಪ್ಪತ್ತು ವರುಷಗಳಲ್ಲಿ.

**ಸು. ನ**—ಭೇಷೋ! ಭೇಷಪ್ಪಾ! ಮನೆ ಕಟ್ಟೋದಕ್ಕೆ ಒಂದೂವರೆ ಸಾವಿರ ರೂಪಾಯಿ ಖರ್ಚಾಯಿತೂ ಅಂದರೆ, ರಿಪೇರಿಗೆ ಎರಡು ಸಾವಿರ ರೂಪಾಯಿ ಖರ್ಚಾಯಿತೇ!!....ನೀನು ಮಾರ್ವಾಡಿ ಮಗನಾಗಿ ಹುಟ್ಟಬೇಕಾಗಿತ್ತೋ ಸಂಗರಾಮಯ್ಯಾ! ನಿನ್ನ ಲೆಕ್ಕದ ಪ್ರಕಾರ ಈಗೀ ಮನೆ ಕೆಡವಿಸುವುದಕ್ಕೆ ನನಗೆ ನಾಲ್ಕು ಸಾವಿರ ರೂಪಾಯಿ ಖರ್ಚಾಗುತ್ತೇ!

**ಸಂಗ**—ಈಗದರ ಮಾತು ಯಾಕೆ ಸುಬ್ಬನರಸಿಂಹಯ್ಯಾ! ನೀನು ಸ್ವಲ್ಪ ಶಾಂತವಾದ ಮೇಲೆ ಬರುತೇನೆ. (ಹೊರಡಲಿರುವನು)

**ಸು. ನ.**—ಶಾಂತವಾಗೋದೇನೋ ಬಂತೂ? ಬಾರೋ ಕೂತ್ಕೋ!

ಸು. ನ:—ನಿನಗಿಂತ ಮೊದಲು ಅವಳೇ ಕಣೋ ನೋಡಿದವಳು ! ಅವಳದೇ ಅಲ್ಲವೇನೋ ಈ ಸೌಭಾಗ್ಯವೆಲ್ಲಾ ?..ಈಗ ಹೇಳು ಈ ಮನೇಗೆ ನಾನೆಷ್ಟು ಕೊಡಬೇಕೂಂತ !

ಸಂಗ —ನೀನು ಕೊಂಡುಕೊಳ್ಳುತೀಯಾ ?

ಸು. ನ —ಸುಮ್ಮ ಸುಮ್ಮನೆ ಕೇಳುತೀನೆಯೇನೋ ! ಕೇಳೋ ! ಕೊಳ್ಳಬೇಕೂಂದರೆ ಬೇರೆ ಮನೆ ಸಿಗುತ್ತೆ. ಆದರೆ ನನ್ನ ಭಾಗ್ಯಲಕ್ಷ್ಮಿ ಒಲಿದು ಪ್ರತ್ಯಕ್ಷವಾದ ಸ್ಥಳ ಇದು. ಇದನ್ನ ಬಿಡೋದಕ್ಕೆ ಇಷ್ಟವಿಲ್ಲ ಕಾಣೋ!.. ಹೇಳೋ ! ಒಂದೇ ಮಾತು; ಚೌಕಸಿ ಬೇಡ.

ಸಂಗ —ನೆನ್ನೆ ಒಬ್ಬ ಗಿರಾಕಿ ಮೂರು ಸಾವಿರಕ್ಕೆ ಕೇಳಿದನಪ್ಪ.

ಸು. ನ:—ಸರೀ ಕಾಣೋ. ನಾನು ಮೂರು ಸಾವಿರದ ಒಂದು ರೂಪಾಯಿ ಕೊಡುತ್ತೇನೆ. ಸರಿಯೇನೋ.

ಸಂಗ—ಹುಂ.

ಸು. ನ:—ಹೋಗು. ಬೇಗ ಹೋಗಿ ಆ ಪುಟ್ಟಣ್ಣನ ಹೋಟಲ್ ಮಹಡೀ ಮೇಲೆ ಗೋವಿಂದಾಚಾರಿ ಇದಾನೆ ಸ್ಟಾಂಪವೆಂಡರು. ಅವನ ಹತ್ತಿರ ಹೋಗಿ ಮೂರು ಸಾವಿರದೊಂದು ರೂಪಾಯಿ ಲೇವಾದೇವೀಗೆ ಬೇಕಾಗೋ ಛಾಪಾ ಕಾಗದ ತಗೊಂಡು ಸಾಕ್ಷೀಗೆ ಆ ಪುಟ್ಟಣ್ಣನ್ನೂ, ಶಾಸ್ತ್ರೀನೂ ಕರೆದುಕೊಂಡು ಜಾಗ್ರತೆ ಬಂದುಬಿಡು. ಹೋಗು.

ಸಂಗ:—ಆಮೇಲೆ ಆ ಬಾಡಿಗೇ ನಲವತ್ತೆರಡು ರೂಪಾಯಿ ಇದೆಯಲ್ಲಾ....ಅದರಲ್ಲಿ....

ಸು. ನ —ಅದನ್ನೂ ಸೇರಿಸಿ....

ಸಂಗ —ಹಾಗಲ್ಲ ಸುಬ್ಬುನರಸಿಂಹಯ್ಯಾ ! ಆ ರೂಪಾಯಿ ನಿನ್ನಲ್ಲೇ ಇರಲಿ. ಬರೋ ಸಲಕ್ಕೆ ಲಾಟರೀಲಿ ಅಷ್ಟು ದುಡ್ಡಿಗೂ ಟಿಕೆಟ್ ತಗೊಂಡು ಬಿಡು....ನನಗೋಸ್ಕರ....ಸುಬ್ಬುಲಕ್ಷ್ಮಮ್ಮನ ಹೆಸರಿನಲ್ಲೇ.....

ಸು. ನ.—ಬರೋ ಸಲಕ್ಕೇನೇನೋ ?

ಸಂಗ.—ಯಾವಾಗಲಾದರೂ ಸರಿಯೇ. ನನ್ನ ಜಾತಕವನ್ನ ನಿನ್ನ ಕೈಗೇ ತಂದುಕೊಡುತೇನೆ. ನೀನು ಎಲ್ಲಾ ವಿಚಾರಿಸಿ..ಗ್ರಹಬಲ ಚೆನ್ನಾಗಿ ಇರೋವಾಗ ಹಾಕಿಸಿಬಿಟ್ಟರೆ ಸರಿ.

**ಸು. ನ.**—ಅಲ್ಲವ್ರೋ ! ಆಹೊತ್ತು ನನ್ನ ಡಬ್ಬಲ್ ಟಿಕೆಟ್‌ನಲ್ಲಿ ಅರ್ಧ ತಗೊಳ್ಳೋ ಅಂದರೇ....ಹಹ್ಹಹ್ಹಹ್ಹಾ ! ಹ್ಹಹ್ಹಹಾ ! ಹಹ್ಹಹ್ಹಹ್ಹಾ !!! (ನಗುವನು)

**ಸಂಗ.**—(ತಲೆಯನ್ನು ಕೊಡವಿ ಹೊರಡುತ್ತಾ) ಅದನ್ನೆಲ್ಲಾ ಜ್ಞಾಪಿಸಬೇಡ ಸುಬ್ಬುನರಸಿಂಹಯ್ಯಾ !....ನಾನು ಹೋಗಿ ಬೇಗ ಬರುತೇನೆ.

**ಸು. ನ**—ಹೋಗಿ ಬಾ ನನ್ನ ಮನೆ ದೇವರೇ !

(ಸಂಗರಾಮಯ್ಯನು ಕತ್ತನ್ನು ತಗ್ಗಿಸಿ ಹೊರಟು ಹೋಗುವನು)

ಲೇ ! ಸುಬಾಣೀ !' ಬಂಗಾರೀ ! ಸುಬ್ಬೂ !..ಭಾಗ್ಯಾ ! ಸೌಭಾಗ್ಯಾ !!!

**ಸು. ಲಕ್ಷ**—(ಈಚೆಗೆ ಬಂದು) ಏನು ಕೂಗಿದಿರಿ ?

**ಸು. ನ:**—ಒಳಗೆ....ಮುರುಕಲು ಮನೆಯಲ್ಲಿ ಸೇರಿಕೊಂಡು ಏನು ಮಾಡುತಿದೀಯೇ ?

**ಸು. ಲಕ್ಷ**—ಚಟ್ಟಿ ತಿರುವಿದ್ದ ಬರಳು ತೊಳದೆ. ಬರಸೋದಕ್ಕೆ ಬಟ್ಟೆ ಚೂರಿಗಾಗಿ ಹುಡುಕುತಾ ಇದ್ದೆ.

**ಸು. ನ**—(ರುಮಾಲನ್ನು ತೆಗೆದು ಎಸೆದು) ಅದಕ್ಕೆ ಯಾಕೇ ಯೋಚನೇ ? ತಗೊಳ್ಳೇ ! ಒರಸಿ ಹಾಕೇ.

**ಸು. ಲಕ್ಷ**—ಉಂಟೇಂದ್ರೇ ?

**ಸು. ನ:**—ಉಂಟು ಕಾಣೇ ! ಉಂಟೇ ! ಕೂತುಕೋ ಬಾ ! ಒರಳನಾ ಮನೇ ಕಟ್ಟೋದಕ್ಕೆ ಬರುವ ಮೇಸ್ತ್ರೀ ಕೈಲೇ ಒರಸಿಸಿದರಾಯಿತು.... ಬಾರೇ ಇಲ್ಲಿ....ಕೂತುಕೋ ಬಾರೇ....

(ಸುಬ್ಬುಲಕ್ಷ್ಮಮ್ಮನು ಬಂದು ಕೂಡುವಳು)

ನಮ್ಮ ಮಗೂ ಮದುವೇಲಿ ಸಂಗೀತ ಕಛೇರಿಗೆ ಯಾರನ್ನ ಕರೆಸೋದೇ ?

**ಸು. ಲಕ್ಷ:**—ಪಟ್ಟಮ್ಮಾಳ್‌ನೋ, ಎಂ. ಎಸ್. ಸುಬ್ಬುಲಕ್ಷ್ಮೀನೋ ಕರೆಸೋದು.

**ಸು. ನ**—ನನಗನ್ನಿಸೋದೂ......ನಿನ್ನ ಕೈಲೇ ಕಛೇರಿ ಮಾಡಿಸಿ ಬಿಡೋದೂಂತ. ನೀನು ಎಂ. ಎಸ್. ಸುಬ್ಬುಲಕ್ಷ್ಮಿ ಆಗದಿದ್ದರೂ, ಎಸ್. ಎಸ್. ಸುಬ್ಬುಲಕ್ಷ್ಮೀ ಕಾಣೇ !

**ಸು. ಲಕ್ಷ**—ಅಂದರೇ ?

**ಸು. ನ** — ಅಂದರೆ, ಶ್ರೀಮಂತ್ ಸುಬ್ಬನರಸಿಂಹಯ್ಯನ ಸುಬ್ಬುಲಕ್ಷ್ಮೀ ಅಂತಾ!

**ಸು. ಲಕ್ಷ್ಮಿ** — ನೀವು ಹಾಸ್ಯಮಾಡುತೀರಿ.

**ಸು. ನ** — ಹಾಸ್ಯಾಂದರೆ ಎಂಥಾದ್ದೇ? ಎಲ್ಲೀ.... ಮಗೂ ಟ್ಯಾಕ್ಸಿ ತರುವ ಹೊತ್ತಿಗೆ ಒಂದು ಹಾಡು ಹೇಳು.... ಹಾಗೇ ಮಗೂ ಮದುವೇ ಕಛೇರಿ ಹೇಗಿರುತ್ತೇಂತ ಕಣ್ಮುಚ್ಚಿಕೊಂಡು ನೋಡುತೇನೆ.

**ಸು. ಲಕ್ಷ್ಮಿ** — ನಾನು ಈಗ ಹಾಡೋದೂಂದ್ರೇ ಏನೂಂದ್ರೇ......

**ಸು ನ** — ಹಾಡೋದೂಂತಾಂದ್ರೇ.... ಹಾಡೇ! ಹಾಡೇ!

**ಸು ಲಕ್ಷ್ಮಿ** — ನಾನು ಹಾಡಿ ಎಷ್ಟು ವರುಷಗಳಾಗಿ ಹೋಯಿತೂ.. ಏನು ಕಥೆ!!

**ಸು. ನ** — ಎಂದೂ ಹಾಡದೇನೇ ಇದ್ದವನು ಈ ವಯಸ್ಸಿನಲ್ಲಿ ನನಗೇನೇ ಹಾಡಬೇಕೂ ಅನ್ನಿಸಿಬಿಟ್ಟಿದೇ.. ಆದರೆ ಯಾರೂ ಕೇಳೊಲ್ಲ.. ನಿನಗೇನೇ.. ಹಾಡೇ! ದಿವ್ಯವಾಗಿರುತ್ತೆ ಹಾಡೇ ಬಂಗಾರೀ

**ಸು. ಲಕ್ಷ್ಮಿ**:— (ಗಂಟಲನ್ನು ಸರಿಮಾಡಿಕೊಂಡು)

ರಾಗ — ಕಾನಡಾ

**ನಾ ನಿನ್ನ ಧ್ಯಾನದೊಳಿರಲು ।**
**ಮಿಕ್ಕ ಹೀನಮಾನವರಿಂದಲೇನಾಗುವುದು ॥**
**ಧಾಳೀಲಿ ಕುದುರೆ ವೈಯಾರದಿ ತಿರುಗುತ ।**
**ಧೂಳನೆರಚಲು ಅದು ರವಿಗೆ ತಾಕುವುದೇನೋ ॥**
**ನಾ ನಿನ್ನ ಧ್ಯಾನದೊಳಿರಲು** ... ...

[ತೆರೆಯು ನಿಧಾನವಾಗಿ ಬೀಳುವುದು]

—



' ಸಾಲದ ಕೈ 'ಯಲ್ಲಿ ಪಾತ್ರವಹಿಸಿದ ಗಡುಗಿನ ಕಟ್ಟಿ ಮತ್ತು ಗೆಳೆಯರು

# ಸಾಲದ ಕೈ

“ ಒಬ್ಬ ಸಾಲಗಾರನು
ತನಗೆ ಸಾಲ ಕೊಟ್ಟವರನ್ನು ತಪ್ಪಿಸಿ
ಸಂಸಾರ ಮಾಡುವ ರೀತಿ ”

೩-೫-೧೯೪೨

ವಿಷಯ ಕೊಟ್ಟದ್ದು . ಸಂಜೆ ಐದು ಗಂಟೆಗೆ
ಅಭಿನಯ ಪ್ರಾರಂಭ . . ರಾತ್ರಿ ಒಂಬತ್ತು ಗಂಟೆಗೆ
ಅಭಿನಯಿಸಿದ ವೇಳೆ . . ೨೦ ನಿಮಿಷ ಮಾತ್ರ

## ಪಾತ್ರಗಳು



ಹನಮಂತರಾಯ . . . . . ಸಾಲಗಾರ

ಕೃಷ್ಣಕ್ಕ . . ಸಾಲಗಾರನ ತಾಯಿ (ವಿಧವೆ)

ಸಾವಿತ್ರಿ . . . . . ಸಾಲಗಾರನ ಹೆಂಡತಿ

ರಾಮು . ಈ ದಂಪತಿಗಳ ಏಕಮಾತ್ರ ಪುತ್ರ

ಇಮಾನಚಂದ . . ಸಾಹುಕಾರ ಮಾರವಾಡಿ

ಬಸಪ್ಪಶೆಟ್ಟಿ . . ಕಿರಾಣಿ ಅಂಗಡಿ ಮಾಲಕ

**ಅಭಿನಯಿಸಿದವರು:**

ಗದುಗಿನ "ಕಟ್ಟಿ ಮತ್ತು ಗೆಳೆಯರು"

## ಪಾತ್ರವಹಿಸಿದವರು



ಹನಮಂತರಾಯ . . ಶ್ರೀ. ಎಚ್. ಕೆ. ಕಟ್ಟಿ

ಕೃಷ್ಣಕ್ಕ . . . ಶ್ರೀ. ಎಂ. ಆರ್. ಜೋಶಿ

ಸಾವಿತ್ರಿ . . . . ಶ್ರೀ. ಎ. ಎಂ. ಘಳಿಗಿ

ರಾಮು . . . . . . . . ಕಟ್ಟಿ ಮುದ್ದು

ಇಮಾನಚಂದ . ಶ್ರೀ. ಜಿ. ವ್ಹಿ., ಹಿರೇಮಠ

ಬಸಪ್ಪಶೆಟ್ಟಿ . ಶ್ರೀ. ಜಿ. ವ್ಹಿ. ಪುರುಷಪ್ಪನವರ

## ಪ್ರವೇಶ

[ಹನಮಂತರಾಯನ ಬಡತನ ತೋರಿಸುವ ಸಾಮಾನ್ಯವಾದ ಒಂದು ಮನೆ. ಸಾವಿತ್ರಿಯು ತನ್ನ ಹತ್ತು ವರುಷದ ಮಗು, ರಾಮುವಿನ ಹುಟ್ಟಿದ ಹಬ್ಬ ಮಾಡಬೇಕೆಂಬ ಯೋಚನೆಯಲ್ಲಿ ಕುಳಿತಿರುವಳು]

**ಸಾವಿತ್ರಿ**—ಮನಿಯೊಳಗ ಬ್ಯಾರೆ ಏನೇನೂ ಇಲ್ಲ. ಇವತ್ತ ನೋಡಿದರ ಹುಡುಗನ ಹುಟ್ಟಿದ ಹಬ್ಬ! ಅವರು ನಿನ್ನೆ ರಾತ್ರೀನs ಹೊರಗ ಹೋದವರು ಇನ್ನೂತನಕ ಬರಲಿಲ್ಲ! ಹುಡುಗ್ಗ ಯಾರ್ಯಾರ್ಕೈತ್ತ ಬಂದ ಛಂದನ್ನ ಟೊಪ್ಪಿಗಿ ಇಲ್ಲಾ, ಅಂಗಿ ಇಲ್ಲಾ! ನಮ್ಮ ಮನಿ ಅಂದರ ಹಾಂಬ ಹೊದ್ದ ಊರು ಆಗ್ಯಾರ ಆಗೇದ. ಅತ್ತೆಮ್ಮನವರಂತೂ ನಮ್ಮ ಮನಿ ಒಗ್ಗೆ ನ್ಯಾಗ್ಯಾ ಕಾಳಜಿ ಇಲ್ಲಾ. ಎಲ್ಲಾ ನನಗs ಹತ್ತೇದ.

**ಕೃಷ್ಣಕ್ಕ**:—(ಗುಡುಗುತ್ತ) ಏನs! ಏನ ಅದು ನಿನಗ ಹತ್ತಿರೋದು? ನೆಪ್ಪನ್ಯಾಂಗ ಈ ಮನಿ ನಡಿಸಿಕೊಂಡು ಹೋಗೋ ಯಜಮಾನತಿ ನಾನು ಇರಲಿಕ್ಕೇ ಪ್ರಾರಂಭಾತ್ನಿs ನಿನ್ನ ಬಡಿವಾಟ. ನಾ ಇದ್ದರs ಇಷ್ಟು. ಇಲ್ಲದಿದ್ದರ ನೀನು ಎಲ್ಲೆ ಹೂಲಗೇರಿ ಮಾಡಿಗ್ಗೇರಿ ಬಂದ ಮಾಡತಿದ್ದೀನೋ ಅಂತೀನಿ!

**ಸಾವಿತ್ರಿ**:—ನೀವು ಇನ್ನೂ ತನಕ ಇದ್ದೀರಂತsನs ಬದುಕ್ಯಾಡೋದು, ಬಡಿದಾಡೋದು. ನೀವು ಇಲ್ಲದ್ದೊಂದು ಅವರೆದುರಿಗೆ, 'ನಿನ್ನ ಹೇಣ್ತಿ ಹಾಂಗಿದ್ದಾಳ, ಹೀಂಗ ಮಾಡ್ತಾಳ' ಅಂತ ಸುಳ್ಳ ಸುಳ್ಳs ಏನಾದರೂ ಹೇಳೋದು. ಅವರು ನನ್ನ ಮ್ಯಾಲೆ ಹರಿಹಾಯೋದು. ಅಲ್ಲಾs ನಾನು 'ಇವತ್ತ ಹುಡುಗನ ಹುಟ್ಟಿದ ಹಬ್ಬ. ಅವರು ಇನ್ನೂ ತನಕ ಬರಲಿಲ್ಲ. ಇನ್ನ ಅವರು ಬಂದು ಸಾಮಾನಾ ಯಾವಾಗ ತರಬೇಕು? ನಾನು ಅಡಿಗಿ ಯಾವಾಗ ಮಾಡಬೇಕು!' ಅಂತ ಯೋಚನೆ ಮಾಡತಿದ್ದೆ. ಅದಕ್ಕ ನೀವ್ಯಾಕ ಇಷ್ಟು ಸಿಟ್ಟಿಗೇಳತೀರಿ?

**ಕೃಷ್ಣಕ್ಕ**:—ಸಿಟ್ಟಿಗೇಳದಿದ್ದರ ಹ್ಯಾಂಗ ಮತ್ತಽ? ನಿನ್ನ ಮಗಾ ಏನು ದೊಡ್ಡ ರಾಜಕುಮಾರನಽ ಹಬ್ಬ ಮಾಡಿಸಿಕೊಳ್ಳಲಿಕ್ಕೆ? ಏನೋ ಮನಿಯೊಳಗ ಅಷ್ಟು ಪಾಯಸಾ ಮಾಡಿ ಇಲ್ಲೇ ನಮ್ಮ ಟೇಶನ್ನದ ಹಣಮಪ್ಪಗ ಒಂದು ಕಾಯಿ ಒಡಿಸಿಕೊಂಡು ಬಂದರಾತು.

**ಸಾವಿತ್ರಿ**—ನೀವ ಹೇಳಿಧಾಂಗ ಮಾಡಿದ್ರ ಮಗ್ಗಲಮನಿ ಪುಟ್ಟಕ್ಕಾವರು ನೋಡಿ ನಕ್ಕಾರು ನನ್ನ. ಯಾಕ? ಅವರು ತಂದ ಹಾಕಲಿಕ್ಕೆ ಬೇಕಾಧಾಂಗ ಘಟ್ಟಿ ಇದ್ದಾರ. ಇರೊಂವ ಒಬ್ಬ ಮಗ ಅದೂ ವರ್ಷಕ್ಕೊಮ್ಮೆ ಮಾಡೋ ಹಬ್ಬ. ನಾ ಹಬ್ಬ ಮಾಡೇ ಬಿಡುವಾಕಿ. ಇಂಥಾ ಕೆಲಸಕ್ಕ ಸಾಲ ಆದರೂ ಅಡ್ಡಿ ಇಲ್ಲಾ.

**ಕೃಷ್ಣಕ್ಕ**—ಇಷ್ಟು ಸಾಲ ಆದರೂ ಸಾಕಾಗಲಿಲ್ಲ ನಿನಗಿನ್ನೂ? ನನಗ ಏನು? ಮನಿಯೊಳಗ ಧಣ್ಣಗ ಕೂಳು ಕೆಚ್ಚತೀದಿ, ಅದು ಮಾಡಸ್ತಽದ ನಿನಗ. ನಮ್ಮ ಹಣಮು ಆಗದಽ ಮತ್ತೊಬ್ಬರ್‍ಯಾರಾದರೂ ಆಗಿದ್ರ ಭಾವಿ ಹಾರಿಕೊಂಬೋ ಆಟ ಎಲ್ಲ್ಯಾದ್ರೂ. ಆ ಯೇನೋ ಪಾಕಿಸ್ತಾನಾ ಬೇಡೋ ಆ ಜಿನ್ನಾ ಸುದ್ಧಾ ನಿನ್ನಷ್ಟು ಹಟಮಾರಿ ಇರಲಿಕ್ಕಿಲ್ಲವ್ವಾ.

**ಸಾವಿತ್ರಿ**—ನಾ ಹಟಾ ಮಾಡೂವಾಕೀನಽ. ಅವರ ಎಲ್ಲಾ ಸಾಲಾನೂ ಹುಡುಗನ ಹಬ್ಬಕಽ ಆಗೆದೇನು? ನೀವು ಇದರೊಳಗೇನು ಮಧ್ಯಸ್ತಿಕೆ ಮಾಡಲಿಕ್ಕೆ ಬರಬ್ಯಾಡ್ರಿ ನನ್ನ ಮನಸ್ಸಿಗೆ ಬಂಧ್ಹಾಂಗ ನಾ ಮಾಡತೀನಿ.

**ರಾಮು**—(ಓಡುತ್ತ ತಾಯಿಯ ಹತ್ತರ ಬಂದು) ಅವ್ವಾ, ಗೋಪ್ಯಾಗಽ, ದತ್ತ್ಯಾಗಽ ಊಟಕ್ಕ ಹೇಳಿ ಬಂದೀನಿ. ಮತ್ತ್ಯಾಽ ಇವತ್ತ ನನ್ನ ಹುಟ್ಟಿದ ಹಬ್ಬ ಅಲ್ಲಽ? ಅವ್ವಾ, ನನಗ ಜರತಾರಿ ಟೊಪಿಗಿ, ಅಂಗಿ, ಬೇಕು ನೋಡು. ಅಪ್ಪ ಎಲ್ಲೆ ಹೋಗ್ಯಾನವ್ವಾ?

**ಕೃಷ್ಣಕ್ಕ**—ನಿಮ್ಮಪ್ಪನಽ? ಹೋಗ್ಯಾನಲ್ಲೆ ಉರುಲು ಹಾಕ್ಕೊಳ್ಳಿಕ್ಕೆ. ಜರದ ಟೊಪಿಗಿ ಅಂತ! ಹೊಸಾ ಅಂಗಿ ಅಂತ! ಮೈಸೂರು ಮಾರಾಜಾ ಮಾಡತಿರಲಿಕ್ಕಿಲ್ಲಪ್ಪ ನಿನ್ನಷ್ಟು ಡೌಲು. ಹುಚ್ಚಮುಂಡೇಗಂಡ! (ರಾಮುವಿಗೆ ಒಂದೇಟು ಹೊಡೆಯುವಳು)

**ಸಾವಿತ್ರಿ**:—ಥೂ! ಹಬ್ಬದ ದಿವಸ ಯಾಕ ಕಣ್ಣೀರ ತಗೀಲಿಕ್ಕೆ ಹಚ್ಚ

ತೀರಿ ಹುಡುಗನ್ನ. (ರಾಮುವಿಗೆ ಸಮಾಧಾನಪಡಿಸುತ್ತ) ಅಳಬ್ಯಾಡ ಬಿಡು ರಾಮು. ಅವರು ಈಗ ಬರತಾರ, ನಾ ತರಿಸಿಕೊಡತೀನಿ.

**ಕೃಷ್ಣಕ್ಕ**—ನಮ್ಮ ಹಣವ್ಯಾ ಒಬ್ಯಾಂವಾ ಮಂಗ್ಯಾ ಆಧಾಂಗ ಆಗ್ಯಾನ ನಿನ್ನ ಕೈಯೊಳಗ ನಮ್ಮ ಹಿರಿಯರ ಮಾತಂತೂ ಲಕ್ಷ್ಯದೊಳಗs ಇಲ್ಲ ನಿನಗ. ಅಂದವ್ಯಾಲೆ ನನಗ್ಯಾತಕ್ಕ ಬೇಕು ಎಲ್ಲಾ ರಗಳಿ? ಹಾಳಾಗಿ ಹೋಗರಿ ಎಲ್ಲಾರು. (ಒಳಗೆ ಹೋಗುವಳು)

[ಹನಮಂತರಾಯನು ಪ್ರವೇಶಿಸುವನು]

**ಹನಮಂತ**—ಯಾಕೋ ರಾಮು, ಯಾಕ ಅಳತೀದಿ? ಏನಾತು ನಿನಗ?

**ಸಾವಿತ್ರಿ:**—ಅಳದೇನು ಮಾಡ್ಯಾನು ಮತ್ತ? ಮನಿಯೊಳಗ ಹುಡುಗನ ಹುಟ್ಟಿದ ಹಬ್ಬ ಇದ್ದದ್ದು ಸುದ್ದಾ ಖಬರ ಇರೋ ಹಾಂಗಿಲ್ಲ ನಿಮಗ. ಅತ್ತೀಯವರು ನೋಡಿದರ ಹುಡುಗನ್ನ ಹಾಕ್ಕೊಂಡು ಧಬಧಬ ಬಡದ್ರು.

**ಹನಮಂತ**—ಹೋಗಲಿ ಬಿಡs, ಮುದಕಿ ಅದು. ಹಂಗs ಒದರ್ಯಾಡೋದs. ಆಕಿ ಮಾತಿಗೆ ಅಷ್ಟ್ಯಾಕ ಲಕ್ಷ್ಯಕೊಡತೀದಿ? ನಿನಗೇನೇನು ಸಾಮಾನು ಬೇಕು ಹೇಳಿರ ಹೇಳಲಾ. (ರಾಮುವಿಗೆ) ಅಂ ರಾಮು ನೀ ಅಷ್ಟ ಹೊರಗ ಬಾಗಲದೊಳಗ ಕೂಡಪಾ. ಯಾರಾದರೂ ನನ್ನ ಕೇಳಲಿಕ್ಕೆ ಬಂದರ ಲಗೂನ ಬಂದು ನನಗ ತಿಳಸು. ನಾ ಈಗ ಅಂಗೀ, ಟೊಪಗಿ ತರತೀನಿ ಹೋಗು. (ರಾಮು ಹೋಗುವನು) ನೀ ಸುಮ್ಮನ ಯಾಕ ಚಿಂತಿ ಮಾಡತೀದೇ? ಬೇಕಾದಷ್ಟು ಸಾಲ ಆದರೂ ನಾ ತಂದು ಹಾಕಲಿಕ್ಕೆ ಘಟ್ಟಿ ಇದ್ದೀನಿ. ನೀ ಯಾತಕ್ಕ ಹೆದರತೀದಿ?

**ಕೃಷ್ಣಕ್ಕ:**—(ಪ್ರವೇಶಿಸಿ) ಆಕ್ಯಾಕ ಹೆದರ್ಯಾಳಪಾ ನೀ ಸಾಲಾ ಮಾಡ್ಲಿಕ್ಕೆ ಘಟ್ಟಿ ಇದ್ದರ? ಮಾಡು ಮಾಡು, ಬೇಕಾದಷ್ಟು ಸಾಲಾ ಮಾಡು. ಇದ್ದ ಒಂದು ಹೊಲ ಹೋತು, ಮನಿ ಹೋತು. ಇನ್ನ ವ್ಯಾಲೆ ನೀನs ಹೋಗತೀದಿ!

**ಹನಮಂತ:**—ಅವ್ವಾ, ನಾ ಇಂಥಾದಕೆಲ್ಲ ಸೊಪ್ಪs ಹಾಕಿಲ್ಲ. ದೊಡ್ಡ ದೊಡ್ಡ ದೇಶನs ಇವತ್ತ ಹಾಳಾಗಿ ಹಳ್ಳಾಕೂಡಿ ಹೋಗಲಿಕ್ಕೆ ಹತ್ಯಾವ. ನೊಟ್ಟ ನನ್ನ ಹೊಲಾ ಮನಿ ಹೋದರ ಹೆದಗಕೀನೆ —

ತಿಜೋರಿ ಒರತನೇಯನರ ಹತ್ತರ ಇದ್ರೂ ತಿಜೋರಿ ಕೀಲೀ ಕೈ ಮಾತ್ರ ನನ್ನ ಕಡೇನs ಇರತsದ!

**ರಾಮು:**—(ಓಡುತ್ತ ಬಂದು) ಅಪ್ಪಾ, ಅಪ್ಪಾ, ಆ ಮಾರವಾಡಿ ಬರಲಿಕ್ಕೆ ಹತ್ಯಾನ.

**ಹನಮಂತ:**—ಆಂss? ಮಾರವಾಡಿ ಬಂದನ? ಅಲೆಲೆಲೆ........

**ಕೃಷ್ಣಕ್ಕ**—(ಪ್ರವೇಶಿಸಿ) ಏನೋ ಹಣಮಂ ಅಗು?

**ಹನಮಂತ**—ಅವ್ವಾ, ಆ ಮಾರವಾಡಿ ಬರಲಿಕ್ಕೆ ಹತ್ಯಾನಂತ. ಇವತ್ತೇನ ಅವಾ ನನ್ನ ಬಿಡೋದಿಲ್ಲ. ಮೊನ್ನೆ ಇಲ್ಲದ್ದೊಂದು ಹೇಳಿ ಕಳಸ ಬೇಕಾದರs ಸಾಕಾಗಿ ಹೋತು ಏನ ಮಾಡಲಿ?

**ಸಾವಿತ್ರಿ**—(ಸ್ವಲ್ಪ ವಿಚಾರಿಸಿ) ಇವತ್ತ ಹಿಂಗ ಮಾಡ್ರೀss ಅಂತೀನಿ. ಬಡ್ಡ ಜೋರ ಬಂದವರ್ಹಾಂಗ ನೀವು ಮಲಿಕ್ಕೊಂಡು ಬಿಡ್ರಿ. ನಾವಿಬ್ಬರೂ ಇಲ್ಲೇ ನಿಮ್ಮ ಉಪಚಾರ ಮಾಡಿದವರ್ಹಾಂಗ ಮಾಡತಿರತೇವಿ.

**ಹನಮಂತ.**—ಹೂಂ. ಇನ್ನ ಅವಾ ಬಂದಗಿಂದಾನು, ಲಗೂನ ಹಾಸಿಗಿ ಹಾಕು.

**ಸಾವಿತ್ರಿ**—ಸ್ವಲ್ಪ ಸಮಾಧಾನಾ ಮಾಡ್ರೆಲ್ಲಾ. ಇಷ್ಟ್ಯಾಕ ಅವಸರಾ ಮಾಡತೀರಿ—ನಾಟಕಾ ಆಡಸೋ ಮಾಸ್ತರನ್ಹಾಂಗ!

**ಕೃಷ್ಣಕ್ಕ:**—ಹಣಮಂ, ಹೀಂಗ ಮಾಡೋ. ನೀ ಸುಮ್ಮನ ದೇವರ ಮನಿಯೊಳಗ ದೇವರ್ಹಾಂಗ ಕೂತಬಿಡು ನಮ್ಮ ಬ್ರಾಹ್ಮಣರ ದೇವರ ಮನಿ ಯೊಳಗ ಆದಾವ ರಂಡೇಗಂಡ ಕಾಲಿಡತಾನೋ ನೋಡತೀನಿ.

**ಹನಮಂತ:**—ದೇವರ ಮನಿಯೊಳಗ ಯಾರs ದೇವರ ತಲಿಮ್ಯಾಲೆ ಕಾಲಿಟ್ಟು ಒರತಾರ ಬಿಡು ನೀ ಅದರ ಕಾಳಜಿ. ನೀ ಸುಮ್ಮನ ಇರು ಅವ್ವಾ. ನಾ ಎಲ್ಲಾ ಅಕಿ ಹೇಳಿಧಾಂಗ ಮಾಡತೀನಿ.

[ಹಾಸಿಗೆಯ ಮೇಲೆ ನರಳುತ್ತ ಮಲಗುವನು. ಸಾವಿತ್ರಿಯೂ, ಕೃಷ್ಣಕ್ಕನೂ ಉಪಚರಿಸಹತ್ತುವರು. ಇಮಾನಚಂದ ಮಾರವಾಡಿಯು ಬರುವನು]

**ಇಮಾನಚಂದ:**—ಅಂ. ಹನಮಂತರಾವು ಘರ್ಮೆ ಆದಾವ?

**ಕೃಷ್ಣಕ್ಕ**—ಬಾರಪ್ಪಾ ಸೇಠಜಿ. ನನ್ನ ಮಗ್ಗ ನಿನ್ನೀನಟ್ಟೂ ಬಂದ

ಜ್ವರ ಆರಿಲ್ಲಾ. ಎಳ್ಳ ಇಟ್ರ ಸಿಡಿಯೋ ಹಾಂಗ ಅದ ಜ್ವರ. ತಂದ ಹಾಕೋ ಒಬ್ಬ ಮಗ ಮಲಗಿಬಿಟ್ಟ್ಯಾನ....!

**ಇಮಾನಚಂದ:**—ಅರೆರೆ! ಬಾಲಾಜಿ! ಕ್ಯಾ ಹನಮಂತರಾವು ತಬೀಯತ್ ಕ್ಯೈಸೇ ಹೈ?

ಹನಮಂತ—(ನರಳುತ್ತ) ಹಾಂ..ಅಯ್ಯಯ್ಯೋ.ಒರ್ರಿ ಸೇಟಜಿಯವರ. ಉಶ್....(ಹೆಂಡತಿಗೆ) ಏ! ಸುಮ್ಮನ ನಿಂತೀಯಲ್ಲs......ಸೇಟಜಿಯವರಿಗೆ ಒಂದು ಕುರ್ಚಿ ತಂದ ಇಡಲ್ಲಾ. (ಸಾವಿತ್ರಿಯು ಒಂದು ಕುರ್ಚಿ ತಂದಿರಿಸುವಳು) ಆಂ..ಆಂ..ಕೂಡ್ರಿ ಸೇಟಜಿಯವರ....

**ಇಮಾನಚಂದ:**—ದೇಖೋ ಹನಮಂತರಾವು, ನಿಮ್ಮ ತಬೀಯತ್ ಅಚ್ಛಾ ಇಲ್ಲಾ, ನಮಗೆ ತಿಳೀತದ. ಲೇಕಿನ್ ನಮ್ಮ ರೋಕಿ ಚಾರ ಬರಸ ಆತು ಇನ್ನೂ ಬರಲೀಲಾ. ರೋಕಾ ನಮ್ಮ ಅಸಲಾ ಗಂಟು ಈಲಾ. ನಾಳೆ ಕೊಡತಾವ, ನಾಡದು ಕೊಡತಾವ ಅಂತಾ ಹೇಳದರೇss....ದೇಖೋ ಹಮಾರಾ ಪೇಟ ಕ್ಯೈಸಾ ಚಲೇಗಾ? ಆಜ ಲೇಕಾ ಚೂಕ್ತಾ ಆಗಬೇಕ್, ಬಿಡೋದಿಲ್ಲ

**ಕೃಷ್ಣಕ್ಕ**—ಎಲ್ಲಿಂದ ಕೊಡಬೇಕಪ್ಪಾ? ನನ್ನ ಮಗ್ಗ ನೆಟ್ಟಗಾತೂ ಅಂದ್ರ ನಿನ್ನ ಸಾಲ ಎಷ್ಟರದು? ಒಬ್ಬರದು ಒಂದು ಪೈ ಇಟಗೊಂಬೋವಲ್ಲ ನನ್ನ ಮಗಾ. ನಿನ್ನ ಮನೀ ತನಕಾ ಬಂದು ಕೊಡತಾನ ಹೋಗು.

**ಇಮಾನಚಂದ.**—ಅರೇ, ಏ ಮೂದಕಿ, ನಮ್ಮಗೆ ಕಿತನಾ ತ್ರಾಸ ಆದಾವ ನಿಮ್ಮಗೇ ಯೇನ್ ಗೊತ್ತು? ಅರೇ, ನಾವ್ ಹಸ್ತೆ ಖುದ್ದ ಮನಿಗೇ ಬಾದ್ರೇ ಬೋಕಿ ಬರೋದಿಲಾ. ನಮ್ಮ ಮನೀಗೆ ಬಂದು ರೋಕಾ ಕೊಡತಾವ್ ನೀಮ್ಮ ಹನಮಂತರಾವ್? ಹನಮಂತರಾವ್, ಆಜ ಲೇಕಾ ಚೂಕ್ತಾ ಆಗವೇಕ್ ದೇಖೋ.

**ಹನಮಂತ:**—ಏನs ಸೇಟಜಿಯವರಿಗೆ ಒಂದಿಷ್ಟು ಚಹಾ ನೀರs ಮಾಡಿ ಕೊಡಲ್ಲಾ. ಆಂ..ಆಂ..ಅಲ್ಲಾ ಮತ್ತs ಅವರು ಚಹಾ ತಗೊಳ್ಳೋದಿಲ್ಲ ಕಾಣಸ್ತದ. ಹಾಲರs ಕಾಸಿ ಕೊಡಲ್ಲ. ಉಶ್....ಇಲ್ಲೋ ನ.... ಪುಟ್ಟಕ್ಕಾವರ ಮನಿಯೊಳಗ ಅಷ್ಟು ಕೇಶರಿ ಇಸಗೊಂಡ ಬಂದು ಹಾಕು.

**ಇಮಾನಚಂದ:**—ಅರೇ ನೀಮುದ್ದು . . ಲೂ ಬ್ಯಾಡಾ ಯೇನೂ ಬ್ಯಾಡಾ. ನಮ್ಮುಗೆ ಈ ಪಾಲಿಸಿ ಬ್ಯಾಡಾ ಹನಮಂತರಾವು. ದೇಖೋ ಹನಮಂತ-ರಾವು, ನಿಮ್ಮುದ್ದು ಬಸ್ಮನ್ ಲೋಕ ಭಾಳ ಸಚ್ಚಾ ಲೋಕ ಅಂತ ಹೇಳ್ತಾವ್. ತುಮ್ ಲೋಕ ಐಸಾ ಝೂಟ ಮತ್ ಬೋಲನಾ. (ಸಾವಿತ್ರಿಯು ಹಾಲು ತಂದು ಕೊಡುವಳು. ಮಾರವಾಡಿಯು ಒಲ್ಲೆ ಒಲ್ಲೆನೆನ್ನುತ್ತ ಕುಡಿಯುವನು) ದೇಖೋ ಹನಮಂತರಾವು, ನೀಮುದ್ದು ಮ್ಯಾಲೆ ನಮ್ಮುದ್ದು ಸೀಟ ಈಲಾ. ದೇಖೋ ಲಢಾಯಿಕಾ ದಿವಸಾ ಅದಾವ್. ನಮ್ಮುದ್ಗೆ ಜಪಾನೀ ಮಾಲು ಇದ್ರೇ ಚಾರ ಪೈಸಾ ಬೇಪಾರ ಆಗ್ತಾವ್. ಲೇಕಿನ್ ಅಬ್ ಜಪಾನೀ ಮಾಲು ಶಿಕ್ಕೋದಿಲ್ಲ ನಮ್ಮುಗೇ ಬೇಪಾರಿಲ್ಲ, ಬೋಕೀಭೀ ಬರೋದಿಲ್ಲಾ. . . . ತುಮೀಚ ಖಯಾಲ ಕರೋ ಹನಮಂತರಾವು

**ಹನಮಂತ.**—ನೋಡ್ರಿ ಸೇಡಜೀಯವರs, ದೇವರ ತಸಕಾ ಸರ್ತಿ ಮಾಡಿ ಹೇಳತೀನಿ. ನಿಮ್ಮ ಸಾಲಾ ಮುಳಗಿಸಬೇಕೂ ಅಂಬಾಂವಾ ಚಾಂಡಾಲ ಇದ್ದಾನು. ನನಗ ಬ್ಯಾರೇ ಧೊಡ್ಡ ರೋಗಾ ಅಂತ ಡಾಕ್ಟರು ಹೇಳ್ಯಾರ. ಇಂಜೆಕ್ಶನ್ ಮಾಡಿಸದ ಹೊರ್ತು ನೆಟ್ಟಗಾಗಲಿಕ್ಕೆ ಸಾಧ್ಯ ಇಲ್ಲಾ ಅಂತ ಹೇಳ್ಳಿಕ್ಕೆ ಹತ್ಯಾರ. ನಿಮ್ಮ ಸಾಲಾ ಒಂದ ಇದ್ದಿದ್ದಿಲ್ಲಾ ಅಂದ್ರ ನಕ್ಕೋತ ಪ್ರಾಣಾ ಬಿಡತಿದ್ದೆ ನೋಡ್ರಿ. ನನಗೇನು ನನ್ನ ಹೆಂಡರು ಮಕ್ಕಳು ಹಾಳಾಗಿ ಹೋಗತಾರ ಅಂತ ಚಿಂತಿಲ್ಲಾ. ನಿಮ್ಮ ಸಾಲದ್ದೊಂದು ಚಿಂತಿ ಅದ ಅದಕ್ಕ ದಯಮಾಡಿ ಮಹರಾಯರs ಇಷ್ಟs ನನಗ ಕೊಟ್ಟೀರಂತ ಇನ್ನೊಂದು ಹತ್ತು ರೂಪಾಯಿ ಕೊಟ್ಟುಬಿಡ್ರಿ. ಅಷ್ಟ ಇಂಜೆಕ್ಶನ್ ಮಾಡಿಸಿಕೊಂಡು ನೆಟ್ಟಗಾಗತೀನಿ. ಖರೋಖರ ಮಹರಾಯರ, ನಿಮ್ಮಂಥಾ ಪುಣ್ಯವಂತ್ರು ಇದ್ದೀರಂತನs ನಮ್ಮಂಥಾ ಬಡವರು ಬದುಕಿಕೊಂಡು ಇದ್ದೀವಿ.

**ಇಮಾನಚಂದ.**—ದೇಖೋ ಹನಮಂತರಾವು, ನೀವ್ ಜರಾ ಅಚ್ಛಾ ಆದಮಿ ಕಾಣಸ್ತಾವ್. ಯೇ ಯೇಕ ದಫಾ ನಿಮ್ಮುದ್ಗೆ ದಹಾ ರುಪಿಯಾ ಕೊಡತಾವ್. ಜಲ್ದಿ ನಮ್ಮುದ್ದು ಬೋಕಿ ಕೊಡಬೇಕ್ ದೇಖೋ. (ಹತ್ತು ರೂಪಾಯಿ ಕೊಡುವನು)

**ಹನಮಂತ:**—ಬ್ರಾಹ್ಮಣ ಆಗಿ ಹುಟ್ಟಿ ನಿಮ್ಮ ಬಾಕಿ ಮುಳಗಿಸಿ ಯಾವ ರೌರವ ನರಕಕ್ಕ ಹೋಗಲಿ ಮುದರಾಯರs. ಎಲ್ಲಾರ್ಹಾಂಗ ನಮ್ಮ ಜಾತಿ ಅಲ್ರಿ. ಸ್ವಲ್ಪ ನನ್ನ ನಾಲಿಗಿನರs ನೋಡ್ರಿ. ನೆಟ್ಟಗಾದ ಮುರುದಿನಾನs ಪೈಗೆ ಪೈ ನಿಮ್ಮ ಲೆಕ್ಕಾ ಚುಕ್ತಾ ಮಾಡತೀನಿ.

**ಇಮಾನಚಂದ.**—ಅಚ್ಛಾ, ನಾವ್ ಬರತಾವ್ ಹನಮಂತರಾವ್.

**ಕೃಷ್ಟಕ್ಕ**—(ಮಾರವಾಡಿಯು ಹೋದದ್ದನ್ನು ನೋಡಿ ಬಂದು) ಹಾಳಾಗಿ ಹೋತಪ್ಪಾ ಪೀಡಾ, ಮುಡ್ಡಿ. ಅಂ....ಹಣಮಪ್ಪ, ಇವತ್ತ ಕುಂದಾಪೂರ ಸ್ವಾಮಿಗೋಳು ದಯಮಾಡಿಸ್ಯಾರ. ತೀರ್ಥಕ್ಕ ಹೋಗತೀನಿ, ಆ ಹತ್ತು ರೂಪಾಯದೊಳಗ ನನಗ ಒಂದೆರಡು ರೂಪಾಯಿ ಕೊಡಪಾ.

**ಹನಮಂತ:**—ಏನs ಅವ್ವಾ, ನಿನಗ ರೊಕ್ಕದ್ದು ಯೇನರ ಮಹತ್ವ ಅನಸತದೇನು? ಅಲ್ಲಾ ಈ ರೊಕ್ಕದ ಸಲುವಾಗಿ, ನನ್ನ ಈ ಸಂಸಾರದ ಸಲುವಾಗಿ ನಾ ಎಷ್ಟು ಕಷ್ಟಪಡತೀನಿ, ಎಷ್ಟು ಮಂದಿ ಕಣ್ಣೊಳಗ ಮಣ್ಣು ಹಾಕತೀನಿ ಅಂಬೋ ಅರಿವು ನಿನಗದsಯೇನು? ಸುಳ್ಳs ಒಂದು ಸೌಟು ನೀರನ ತೀರ್ಥ ಅಂತ ತಗೊಂಬೋದು, ಎರಡೆರಡು ರೂಪಾಯಿ ಕಣ್ಣು ಮುಚ್ಚಿ ಒಗದು ಬರೋದು. ಭಲೋ ಅದ ಕೆಲಸ.

[ಅಷ್ಟರಲ್ಲಿ ಬಸಪ್ಪಶೆಟ್ಟಿಯು ಒಳ್ಳೀ ಸಿಟ್ಟಿನಿಂದ ಬರುವನು. ಸಾವಿತ್ರಿಯೂ, ಕೃಷ್ಟಕ್ಕನೂ ಒಳಗೆ ಹೋಗುವರು]

**ಬಸಪ್ಪಶೆಟ್ಟಿ:**—ಯಾಕಪಾ ಹನಮಂತರಾಯಾ, ಒಳ್ಳೇ ಮಾತಿಲೆ ನೀ ಯೇನ ನಮ್ಮ ಲೆಕ್ಕಾ ಚುಕತಾ ಮಾಢ್ಯಾಂಗ ಕಾಣೂದಿಲ್ಲ. ನಿನ್ನಂತಾ ಕಗ್ಗಾಸ ಅಸಾಮೀನs ನೋಡಿದ್ದಿಲ್ಲಪಾ ಇನ್ನೂತನಕ. ಬ್ರಾಂಮ್ರು ಮಂದಿ ಶ್ಯಾಣೇರಂತ. ಆ ಶ್ಯಾಣೇತನಾನ ಹೀಂಗ ಒಬ್ಬರ ಗಂಟುಹಾಕೋದ್ರೊಳಗ ಉಪಯೋಗ ಮಾಡಿಕೊಂತೀರಿ ನೋಡು ನೀವು. ನಿಮ್ಮ ಮನ್ಯಾಗ ತಿನ್ನಾಕ ಚಟಾಕ ಅಕ್ಕಿ ಇಲ್ಲದಾಗ ಬಂದು, ಹ್ಯಾಂಗ ಕೈಕಾಲು ಕಟಿಗೊಂಡು ಸಾವಮಾನಾ ಒಯ್ತೀದಿ ನೋಡು. ಹಾಂಗ ರೊಕ್ಕಾ ಕೊಡಾಕ ಬರೂದಿಲ್ಲ!

**ಹನಮಂತ**—ಅಲೆಲೆ, ಬರ್ರಿ ಶೆಟ್ರs! ಈಗ ನಾ ನಿಮ್ಮ ಅಂಗಡೀ ಕಡೇನs ಹೊರಟಿದ್ದೆ. ಮತ್ಯಾಕ ನೀವು ಇಲ್ಲೀ ತನಕಾ ಬರೋ ತ್ರಾಸು ತಗೊಂಡ್ರಿ ಅಂತೀನಿ.

**ಬಸಪ್ಪಶೆಟ್ಟಿ:**—ಅಲೇ ಇವನ, ಮನೀತನಾ ಬಾಕಿ ಕೇಳಾಕ ಬಂದ್ರ ನೆಲೀ ಇಲ್ಲ. ಇನ್ನ ಮನೀತನಕಾ ಬಂದ ಕೂತಾನಂತಿವ! ಯೇನ ಚಂಡಿಗೆ ಕೈಯು. ನನಗ ಕಲಸಾಕ ಬಿರತೀಯಲ್ಲೋ ಹನಮಂತರಾಯಾ!

**ಹನಮಂತ**—ಕೂತರ ಕೂಡ್ರಿ ಶೆಟ್ರ. ನೀವು ತಂದ್ರೆಪಾ, ನಾ ಮಗನ್ರೆಪಾ. ತಂದಿ ಮಕ್ಕಳು ಎಷ್ಟು ಒದರಾಡಿದರೇನು, ಎಷ್ಟು ಜಗಳಾಡಿದರ ಏನು? ಹೀಂಗ ನಡೆಯೂದ್ರೆಪಾ ಎಲ್ಲಾನೂ. ಆಂ..ಅಲ್ರಿ ಶೆಟ್ರ, ಹೋದ ಸರೇದ ಇಲೆಕ್ಶನ್‌ದಾಗ ಇನ್ನೊಂದ ಹತ್ತು ನೋಟು ಜಾಸ್ತಿ ಬಿದ್ದಿದ್ದವ್ರ ಅಂದ್ರ ಕಾಳಿ ಹುಡಿಕಿಬಿಡತಿದ್ರಿ ಊರೊಳಗ. ನೀವು ಆರಿಸಿ ಬಂದಿದ್ದದ್ದಕ್ಕ ನಾನು ಊರೊಳಗ ಮಾರಿಯೆತ್ತಿ ಅಡ್ಯಾಡುವಹಾಂಗಿಲ್ಲ. ಈ ವರ್ಷನೂ ನಿಮ್ಮ ಇದರಿನ ಅಂಗಡಿ ಗಾಣಿಗೇರ ಗಂಗಪ್ಪ ಇಲೆಕ್ಶನ್ನಿಗೆ ನಿಲ್ಲತಾನಂತ. ಅವರ ಪೈಕಿ ಮಂದಿ ನನ್ನೆದುರಿಗೆ 'ನಿಮ್ಮ **ಬಸಪ್ಪಶೆಟ್ರು** ಹೋದ ಸಲ ನಿಂತು ಮಂಗ್ಯಾನ್ಹಂಗ ಸೋತು ಕಿಸಿದರು. ಈ ಸರೇನೂ ನಿಂದರ್ಲಿ ಅವನ ಡಬ್ಬ ಹಾಕತೀವಿ' ಹಾಂಗ ಹೀಂಗ ಅಂತ ಮಾತಾಡತಲಿಕ್ಕೆ ಹತ್ತಿದ ಕೂಡ್ಲೆ ನನಗೂ ಭಾಳ ಸಿಟ್ಟು ಬಂತ್ರೆಪಾ. ನಾನೂ ಆ ಮಕ್ಕಳಿಗೆ 'ಹೋದ ವರ್ಷ ಫೇಲ ಆದ್ರ ಏನಾತೋ. ನಮ್ಮ **ಬಸಪ್ಪಶೆಟ್ರೂ** ಅಂದ್ರ ಹಕನಾಕ ಅಂತ ತಿಳಿದೀದೇನು? ಈ ವರ್ಷ ನಮ್ಮ ಹೊಡ್ತಾ ನೋಡು. ಶಿರಟ್ಟೀಮಠದ ಆನೀ ತರಿಸಿ, ಆನೀ ಮ್ಯಾಲೆ ಶೆಟ್ರನ್ನ ಮೆರಸತೀವಿ ಹಂಗ' ಅಂತ ಹೇಳಿಬಿಟ್ಟೆ.

**ಬಸಪ್ಪಶೆಟ್ಟಿ**—ಹೀಂಗೇನ ಹಂಗಾರ? ಅಲಾಲಾಲಾ ಎಷ್ಟು ನೊಕ್ಕಪಾ ಆ ಮಗಾ ಗಂಗ್ಯಾಂದು. ಆಗಲಿ ಹಂಗಾರ; ನಂದರ ಆಗಲಿ, ಅವಂದರ ಆಗಲಿ. ನನ ಮನೀ ಗದ್ದಿಗ್ಗಲ್ಲು ಸರದ್ರೂ ನಾ ಯೇನ ಹೆದರೋ ಹಾಂಗಿಲ್ಲ. ನೀ ಮಾತ್ರ ಬಂದೀಟು ಓಡ್ಯಾಡಬೇಕು ನೋಡು. ಮತ್ತ ಅಂವಾ ಗಂಗ್ಯಾ ನಿನಗೇನರ ರೊಕ್ಕದ ಆಶಾ ಹಚ್ಯಾನು, ಜ್ವಾಕಿ ಮತ್ತ. ರೊಕ್ಕಕ್ಕ ಹೆದರಬ್ಯಾಡೇನಪಾ. ನೀ ಇಷ್ಟ ನನ್ನ ಸಲುವಾಗಿ ಕೆಲಸಾ ಮಾಡತೀದಿ ಅಂದ ಮ್ಯಾಲೆ ನಿನಗ ನಾ ರೊಕ್ಕಕ್ಕ ಹಿಂದಮುಂದ ನೋಡೇನ!

**ಹನಮಂತ:**—ಛೇ ಛೇ! ಅಲ್ರೀ ಶೆಟ್ರ, ನಾ ನಿಮಗ ಎಂದಾದ್ರೂ ಹೊರ್ತ ಇದ್ದೇನ? ನನಗ ನೀವು ಯಾವ ಥರದ ಮದ್ದತ್ತು ಮಾಡೋದಿಲ್ಲಾ ಅಂತ ಆ ಗಂಗಪ್ಪನ ರೊಕ್ಕಕ್ಕ ಆಶಾ ಮಾಡಲಿ? ಬೇಕಾಧ್ಯಾಂಗ

ರೊಕ್ಕಾ ಕೊಡತೀರಿ. ಅಪಾ ಮನಿಯೊಳಗ ಸಾಮಾನು ಇಲ್ಲಾಽಂದ್ರ ಸಾಮಾನ ಕೊಡತೀರಿ. ಇದಕ್ಕೂ ಹೆಚ್ಚು ಇನ್ನೇನು ಬೇಕು ನಮಗ? ಇವತ್ತ ಅಷ್ಟ ನಮ್ಮ ಹುಡುಗನ ಹುಟ್ಟಿದ ಹಬ್ಬ ಇತ್ತಽ. ಅದಕ್ಕ ನಿಮ್ಮ ಅಂಗಡಿಯೊಳಗ ಅಷ್ಟು ಕಿರಾಣಿ ಸಾಮಾನ ತಂಧ್ಹಾಂಗುನೂ ಆತೂ, ಈ ಇಲೆಕ್ಶನ್ ಸುದ್ದಿ ನಿಮಗ ತಿಳಿಸಿಧ್ಹಾಂಗ ಆತೂ ಅಂತ ನಿಮ್ಮ ಅಂಗಡೀ ಕಡೇನಽ ಹೊರಟಿದ್ದೆ.

**ಬಸಪ್ಪಶೆಟ್ಟಿ**—ಹಂಗಾರ ನಿನಗೇನ ಸಾಮಾನ ಬೇಕು ಒಂದ ಒಯ್ಯೋನಪಾ. ಅದ್ರ ನಮ್ಮ ಕೆಲಸದ ಕಡೆಗೆ ನಾತ ಒಂಚೂರು ನಿಗಾ ಇರ್ಲಿ ತೀರ್ತು. ನಾ ಇನ್ನ ಬರತೀನಿ.

[ಶೆಟ್ಟರು ಹೋಗುವರು. ಸಾವಿತ್ರಿಯೂ, ಕೃಷ್ಣಕ್ಕನೂ ಒಳಗಿನಿಂದ ಬರುವರು ಎಲ್ಲರ ಮೋರೆಯ ಮೇಲೂ ಸಂಸಾರ ನೌಕೆಯ ಯಶಸ್ವಿ ಮುನ್ನಡೆಯ ಬಗ್ಗೆ ಉತ್ಸಾಹ ಕಂಡುಬರುತ್ತಿದೆ]

**ಹನಮಂತ:**—ಸಾವಿತ್ರೀ! ಇವತ್ತ ಹುಡುಗನ ಹುಟ್ಟಿದ ಹಬ್ಬ ಮಾಡಲಿಕ್ಕೆ ಏನು ತೊಂದರಿ ಇಲ್ಲಲ್ಲಾ. (ಹೆಂಡತಿಯ ಕಡೆಗೆ ಮುಗುಳುನಗೆ ಬೀರುವನು)

**ಕೃಷ್ಣಕ್ಕ**—(ಸಾವಿತ್ರಿಗೆ ಹರ್ಷಾತಿರೇಕದಿಂದ) ಅಯ್ಯೋಽ ನನ ಸತ್ಯವಾನನ ಸಾವಿತ್ರಿಽ! ಹಿಂದಿನ ಕಾಲದೊಳಗ ಸಾವಿತ್ರಿ ತನ್ನ ಗಂಡ ಸತ್ಯವಾನನ ಜೀಂವಾ ಯಮಧರ್ಮನಿಂದ ಉಳಿಸಿಕೊಂಡ್ಹಾಂಗ ಇವತ್ತ ನೀನು ಆ ಸಾವಕಾರರಿಂದ ನನ್ನ ಹಣಮಂನ ಪ್ರಾಣಾ ಉಳಿಸಿದೆವ್ವಾ! ಬಾರಽಽ ನನ್ನ ಕಲಿಯುಗದ ಹಣಮಂತನ ಸಾವಿತ್ರಿ!!!

[ತೆರೆಯು ನಿಧಾನವಾಗಿ ಬೀಳುವುದು]

—